॥ ಓಂ ॥

ಶ್ರೀ ಮಾಲತೀಶಾಯನಮಃ

[ಸಪ್ತಮ ಕುಸುಮ]

# ಶ್ರೀ ಮಲ್ಲಾರಿ ಕೀರ್ತನ.



ಲೇಖಕ:—

ರಾಮದಾಸ ತೋಸೀಖಾನಿ, ಹಾನಗಲ್ಲ.



ಪ್ರಕಾಶಕ:—ಮುರಹರ ರಾಮಚಂದ್ರ ಶಿವಪೂಜಿ,
ಶ್ರೀ ಮಾಲತೀಶಾರ್ಚಕ, ದೇವಗಿರಿ.

ಪ್ರಸಿದ್ಧಿಸಿದ ಸ್ಥಳ:—ಶ್ರೀಮಾಲತೀಶಮಂದಿರ ದೇವಗಿರಿ.

[ಪ್ರಥಮ ಮುದ್ರಣ ೧,೦೦೦]

೧೯೨೮

ಖ. ಬೀರಿ.

[ಬೆಲೆ ೫ ಆಣೆ.]



# ಪ್ರಸ್ತಾವನೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕೀರ್ತನಗ್ರಂಥಗಳು ತೀರಕಡಿಮೆ, ಬಹುಶಃ ಬೆರಳಿಲೆಣಿಸುವಷ್ಟು ದೊರೆಯುಬಹುದೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಂಥ ಸ್ಥಿತಿಯಲ್ಲಿ ನಮ್ಮ ಮಿತ್ರರಾದ ಶ್ರೀ ಮ. ರಾ. ಶಿವಪೂಜೆಯವರು ಮಾಲತೀಶನ ಮೇಲಿನ ಉತ್ಕಟಭಕ್ತಿಯಿಂದ ಶ್ರೀಯುತ ತೋಸಿಖಾನಿಯರೆಂಬ ಯೋಗ್ಯತಾ ಸಂಪನ್ನ ಗ್ರಂಥಕರ್ತೃಗಳಿಂದ ಮಾಲತೀಶನು ಅವತಾರ ಮಾಡಿ ಜಗದುದ್ಧಾರ ಮಾಡಿದ "ಮಲ್ಲಾರಿ ಮಾಹಾತ್ಮ್ಯ" ಕೀರ್ತನವನ್ನು ಬರಿಸಿ ಪ್ರಕಟಿಸಿದ್ದು ಕನ್ನಡಿಗರಿಗೂ ಮಾಲತೀಶನ ಭಕ್ತರಿಗೂ ಬಹಳ ಯೋಗ್ಯವಾಯಿತೆಂದು ಹೇಳಬಹುದು. ಈ ಕೀರ್ತನರೂಪವಾದ ಮಲ್ಲಾರೀಮಾಹಾತ್ಮೆಯು ಸುರಸವೂ, ಬೋಧಪ್ರದವೂ ಇರುವದಲ್ಲದೆ ನವವಿಧಭಕ್ತಿಯಿಂದ ತುಂಬಿತುಳುಕುತ್ತಿರುವದು. ಗ್ರಂಥಕರ್ತರು ಇದರ ಪೂರ್ವಪೀಠಿಕೆಯಲ್ಲಿ ಆಧ್ಯಾತ್ಮಿಕ ವಿಷಯುವಾಗಿರುವ ಗೂಢ ತತ್ವಗಳನ್ನು ಸುಲಭವಾಗಿಯೂ, ಮನೋಬೋಧವಾಗಿಯೂ, ಸರಸವಾಗಿಯೂ ಪ್ರತಿಪಾದಿಸಿರುವರು. ಆಖ್ಯಾನದಲ್ಲಿಯು ಮಣಿ-ಮಲ್ಲಾಸುರಾದಿ ರಕ್ಕಸರ ವಿರೋಧಭಕ್ತಿಯಿಂದ ವಾಚಕರ ಮೈಮೇಲೆ ರೋಮಾಂಚಗಳೇಳುತ್ತಿದ್ದರೂ, ಭಕ್ತರಕ್ಷಕನಾದ ಭಗವಂತನ ಭಕ್ತಾಭಿಮಾನವನ್ನು ಕಂಡು ಅಂತಃಕರಣವು ಕರಗಿ ನೀರಾಗದಿರದು; ಹಾಗು "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೇ" ॥ ಎಂಬ ಭಗವದುಕ್ತಿಯು ನೆನಪಾಗಿ ಮನಸ್ಸಿನಲ್ಲಿ ಭಗವಂತನ ವಿಷಯುವಾಗಿ ನಿಶ್ಚಲವಾದ ಭಕ್ತಿಯು ನೆಲಿಸದೆ ಇರದು.

ಕಡೆಗೆ ಸ್ವಲ್ಪದರಲ್ಲಿ ಹೇಳಬೇಕೆಂದರೆ, ಮಾಲತೀಶನ ಮೇಲಿನ ಉತ್ಕಟವಾದ ಭಕ್ತಿಯೊಂದರ ಮೂಲಕವಾಗಿಯೇ ವರ್ಷೆರಡು ವರ್ಷಗಳಿಂದ ಪರಿಶ್ರಮಬಟ್ಟು ಈ ಕೀರ್ತನೆಯನ್ನು ಗ್ರಂಥಕರ್ತರಿಂದ ಸಂಪಾದಿಸಿ ಶ್ರೀಯುತ ಶಿವಪೂಜೆಯವರು ಶಿವನ ಪೂಜೆಯ ಪುಷ್ಪವೆಂದು ಕನ್ನಡ ವಾಙ್ಮಯೋದ್ಯಾನದಲ್ಲಿ ಪ್ರಕಟಗೊಳಿಸಿರುವರು. ಕನ್ನಡವಾಚಕರೂ, ಮಾಲತೀಶನ ಭಕ್ತರೂ ಇದಕ್ಕೆ ಆಶ್ರಯುವನ್ನಿತ್ತು ಯೋಗ್ಯತಾಸಂಪನ್ನರಾದ ಕೀರ್ತನಕರ್ತೃ ಶ್ರೀ. ತೋಸಿಖಾನಿಯವರ ಹಾಗು ಶ್ರೀ. ಶಿವಪೂಜೆಯವರ ಶ್ರಮಸಾಫಲ್ಯ ಮಾಡಬೇಕಾಗಿ ವಿನಂತಿ.

ಸಜ್ಜನ ವಿಧೇಯ, ಹೊಸೂರ.

# ಲೇಖಕನ ಹೃದ್ಗತ.

|| ಶಾ. ವೃ ||

ಮಾರಾರಾತಿ ಪರಾತ್ಪರಂ ತ್ರಿಪುರಸಂಹಾರಂ ಹರಂ ಶಂಕರಂ |
ಕಾರುಣ್ಯಾಬ್ಧಿ ಸದಾಶಿವಂ ಲಸಿತಭಸ್ಮಾಂಕಂ ಶಿವಂ ಶೇಖರಂ |
ಧೀರಂ ವ್ಯಾಲಸುಮಾಲಲೋಲ ನಿಲಯಂ ಶೂಲಾಂಕ ಕಾಲಾಂತಕಂ |
ಧಾರಂ ಪಾರ್ವತಿ ಶರ್ವವಂದೇ ವಿಭುವಂ ಶ್ವೇತಾಂಶುಗಂಗಾಧರಂ ||೧||

|| ಭಾ. ಷ. ||

ನಮ್ಮ ಕನ್ನಡ ನಾಡೊಳುದಿಸಿದೆ | ನಮ್ಮ ಭೂಮಿಯ ಪೈರನುಂಡೆನು |
ನಮ್ಮ ಕನ್ನಡ ಮಾತು ಕಲಿತೆನು ನಾಲ್ವರೊಡಗೂಡಿ ||
ನಮ್ಮ ಕನ್ನಡ ದೋದುವನೆಯೊಳು | ನಮ್ಮ ಪೂರ್ವಜರಿಂದ ಗೆಯ್ದಿಹ |
ನಮ್ಮ ದೇಶದ ರಸಿಕರುಕ್ತಿಯ ಪಾಠಮಾಡಿದೆನು ||೧||

ನಮ್ಮ ನಮ್ಮೊಳು ಬುದ್ಧಿ ವಿಕಸಿತ | ಮೊಮ್ಮನಸ್ಸಿಲಿ ಮಾಡಿಕೊಂಡೆನು |
ನಮ್ಮ ಕನ್ನಡ ಮಾತಿಗುಬ್ಬಿತ ಭಕ್ತಿರಸದಿಂದ ||
ನಮ್ಮ ಕನ್ನಡ ದೇಶವಾಳುವ | ನಮ್ಮ ಶ್ರೀಕೃಷ್ಣೇಂದ್ರ ಭೂಪತಿ |
ತಮ್ಮ ಪೊಟ್ಟೆಯ ಮಕ್ಕಳಿಂದೇ ಪೊರೆವರಿದಕಾಗೀ ||೨||

ಏನು ಕನ್ನಡ ನುಡಿಯ ರಸಿಕತೆ | ತಾನು ಓದುವದಾಗದಿದ್ದರೆ |
ಊಣೆಯೇನದ ರಭ್ಯುದಯಕೀ ರಾಷ್ಟ್ರ ತುಂಬಿಹುದು ||
ಮಾನವಂತರು ಗೆಯ್ದ ಕಾರ್ಯದ | ಜಾಣತನ ಕಾಲೆಕ್ಕವುಂಟೇ |
ಏನು ಹೇಳಲಿ ನಮ್ಮ ಕನ್ನಡೆ ರನ್ನಗನ್ನಡಿಯು ||೩||

ಇಂತು ನವರಸ ತುಂಬಿದಗಣಿತ | ಗ್ರಂಥದಾಗರವಾದ ಕನ್ನಡ |
ವಿಂತು ನಮಗನವರತ ಬೇಡಿದುದೀವ ಕೈಯಿಂದ ||
ಚಿಂತೆಗಳೆದುದ್ಧರಿಪೆನೆನ್ನುತ | ನಿಂತ ನಲಿಯುವ ನಮ್ಮ ಕನ್ನಡ |
ಸಂತಮಂಡಳಿ ವೀರಧೀರರ ಅವ್ವ ಪಡೆದವ್ವ ||೪||

ಮೊದಲಿಗವ್ವನ ಗುರುತು ಬಳಿಕಾ | ಸದಯ ಮೂರುತಿಯಾದ ತಂದೆಯ |
ವಿದಿತವಾಗುವದಷ್ಟರೊಳಗಲ್ಲಿದ್ದ ಪರಿಚಿತರ ||

ಒದಗಿಬಂದವರಾಪ್ತವರ್ಗದ |ಹದದಮೇರೆಗೆ ಸಲುಗೆಯುವುದು |
ಅದರ ಪರಿಯಂ ನಮ್ಮ ಮಾತಿನ ಮೇಲೆಯುಕ್ಕರತೇ ||೫||

ಅದಕೆ ಕನ್ನಡ ನುಡಿಯೊಳಾತನ|ಪದವ ಪಾಡುತ ಸಭೆಯೊಳೆಲ್ಲರ|
ಮುದವ ಒಡಿಪಾ ಭಜನಕೀರ್ತನ ಕಥೆಯುಸಾರವನು ||
ಹದಕೆ ಸರಿಯಾಗೊರೆವುತಿದ್ದೆನು | ಚದುರನಪ್ಪಣೆ ಮಾರ್ಗ ನೋಡುತ |
ತುದಿಗೆಯಾಯಿತು ಮಾಲತೀಶನ ಚರಿತ ಬರೆಯೆಂದು ||೬||

ಅದುದಪ್ಪಣೆಯೆಂದು ಮನದೊಳು | ಮೋದಬಡಿದೇ ನನ್ನ ಯೊಗ್ಯತೆ |
ಗಾದ ತೆರದಿಂಗೆಯ್ದು ಕನ್ನಡ ಮಾತಿನೊಳಗಿದನೂ ||
ಸಾದರತ್ವದಿ ರಸಿಕಮಂಡಳಿ | ಪಾದದೆಡೆಯೊಳು ನೀಡಿಬೇಡುವೆ |
ಹಾದಿತೋರಿಸಿ ಸಲಹಬೇಕೈ ಕನ್ನಡೂರ್ಜಿತಕೇ ||೭||

ರಾಮನಂ ಪಡೆದಾತ ಕೃಷ್ಣನು | ರಾಮಕೃಷ್ಣರು ಶ್ರೀವಸಿಷ್ಠರ |
ಪ್ರೇಮಪಾತ್ರರು ತಾವೆಯಾದರು ಹಾನಗಲ್ಲಿನಲೀ ||
ಸ್ವಾಮಿ ಶ್ರೀಗುರು ದತ್ತನಾಜ್ಞೆಯು | ನೇಮಬಿಡದಲೆ ಪಾಲಿಸುತ್ತ ಸು |
ನಾಮ ಘೋಷದೆ ಭಕ್ತವರ್ಗಕೆ ತೋಷಖನಿಯಾಗೀ ||೮||

ರಾಮನಾಮದೆ ಕಲೆವರೀಘಟ | ಪ್ರೇಮಪೂರಿತ ದತ್ತಗುರುಗಳು|
ಕಾಮಿತಂಗಳ ನೀವಕಯ್ಯಂ ಬಿಡದೆ ನಿಂತಿಹರು||
ವ್ಯೋಮಕೇಶನು ಮಾಡಿದಾಟದ | ಆ ಮಹಾಕಥೆ ಕೀರ್ತಿಯನ್ನೇ |
ಗ್ರಾಮ ಸುರಗಿರಿ ಮಾಲತೀಶನ ಮುಂದೆಯಿಟ್ಟಿಹೆನು ||೯||

ಇಂತು ಕನ್ನಡದೇಳ್ಗೆಗೋಸುಗ | ಕಂತುಹರ ಕೀರ್ತನವ ಸಭೆಯೊಳ |
ಗೆಂತು ಪೇಳಿದರೆಂಬ ಸಂಗತಿ ದಾಸಪರಿಚಯುವ ||
ಅಂತರಾತ್ಮನು ಮನಕೆ ಪ್ರೇರಣೆ | ಯೆಂತುಗೆಯ್ದನೊ ಹಾಗೆ ಬಡಬಡಿ |
ಸಿಂತು ನಾಲ್ವರ ಪಾದಕಿಟ್ಟೆನು ಭಕ್ತಿರಸದಿಂದ ||೧೦||

---

ರಾಮಚಂದ್ರ ಕೃಷ್ಣ ತೋಸೀಖಾನಿ, ಹಾನಗಲ್ಲು.

ಮಿತಿ:—ಶ್ರೀ ಶಾಲಿವಾಹನ ಶಕೆ ೧೮೫೦ನೇ ವಿಭವ ಸಂ|ದ ಅಧಿಕ ಶ್ರಾವಣ ಶುದ್ಧ ೧೫ ಬುಧವಾರ. ತಾ|| ೧-೮-೧೯೨೮

# ಪ್ರಕಾಶಕನ ಎರಡು ಮಾತುಗಳು.

ಓಂ ನಮೋ ಭಗವತೇ ಮಹಾದೇವಾಯ.

ಮಣಿಕ ಮಲ್ಲಾಸುರರ ಕ್ರೋಧದಿ ।
ಹಣಿದ ತ್ರಿಪುರಾಂತಕನೆ ಗಂಗಾ- ।
ವನಿತೆ ರಮಣನೆ ಮ್ಹಾಲಸಾಧಿಪ ಜಗದಧೀಶ್ವರನೇ ॥
ಚಿನುಮಯಾತ್ಮಕ ದಿವ್ಯರೂಪನೆ ।
ಮನದೆ ನೀನೆಲೆಯಾಗಿ ಭಕ್ತರ ।
ಘನದಲೀಲೆಯ ನೋಡಿ ನಲಿವನೆ ಸಲಹೊ ಯೆನ್ನೊಡೆಯಾ ॥

ಪರಮೇಶ್ವರನಿಗೆ ತನ್ನಿಂದ ಉತ್ಪನ್ನವಾದ ಸಕಲ ಚರಾಚರ ವಸ್ತುಗಳನ್ನು ಸಂರಕ್ಷಿಸುವದು ಆದ್ಯ ಕರ್ತವ್ಯವಾಗಿರುತ್ತದೆ. ಅದಕ್ಕೋಸ್ಕರ ಅವನು ಅನೇಕ ಬಗೆಯ ಸಂಗತಿಗಳನ್ನು ಏರ್ಪಡಿಸಿಟ್ಟಿರುವನು.

ಅವುಗಳಲ್ಲಿ ಮುಖ್ಯವಾಗಿ ವೇದವಿಜ್ಞಾನ, ಸಾಧುಸತ್ಪುರುಷರ ಪ್ರವಚನ, ಪುರಾಣ-ಪುಣ್ಯಕಥೆ, ಕೀರ್ತನ-ಭಜನೆ ಮೊದಲಾದ ಸಾಧನಗಳಿಂದ ಅಜ್ಞರನ್ನು ಸನ್ಮಾರ್ಗಕ್ಕೆ ತರುತ್ತಿರುವನು. ಈಗಿನ ಅಲ್ಪಾಯುಷ್ಯದ(ಕಲಿಯುಗದ)ನಮ್ಮಂಥ ಪಾಮರರಿಗೆ ಅತಿ ಸುಲಭವಾಗಿರುವಂಥ, ಅನಾಯಾಸವಾಗಿ ಸಾಧಿಸುವಂಥ ಸನ್ಮಾರ್ಗದರ್ಶಕವಾದ ಸಾಧನವೆಂದರೆ ಕೀರ್ತನ, ಭಜನೆಗಳೇ ಸರಿ.

ಇಂಥ ಅಮೌಲ್ಯವಾದ ಸಾಧನವನ್ನು ಶ್ರೀ ಭಗವಂತನ ಪ್ರೇರಣೆಯಿಂದ ಈ ವರೆಗೆ ಎಷ್ಟೋ ಮಹನೀಯರು ರಚಿಸಿರುವರು, ರಚಿಸುತ್ತಿರುವರು; ಮತ್ತು ಮುಂದೆಯಾದರೂ ಆತನ ಆಜ್ಞಾನುಸಾರ ರಚಿಸುವರು. ಇರಲಿ.

ಇಂಥ ಸತ್ಕಥಾಶ್ರವಣಕ್ಕೆ ಮನಮರುಗದೆ, ಬಾಗದೆ, ಅಹಂಭಾವದಿಂದ ಪಾಪದ ಸೆಳವಿನಲ್ಲಿಯೇ ನಾವು ಹೋಗುತ್ತಿರುತ್ತೇವೆ. ಇದೆಂಥ ವಿಚಿತ್ರ ಲೀಲೆಯು! ಇದೇನು ಮಳೆಯನೀರನ್ನು ಬಿಟ್ಟು, ಮಂಜಿನನೀರಿಗೆ ಕಯ್ಯೊಡ್ಡಿದಂತೆ! ಭಗವದ್ಭಕ್ತರ ಮೇಳದಲ್ಲಿ, ಆ ಪ್ರಭುವಿನ ಪ್ರೇರಣೆಯಿಂದ ಸದಾನಂದ ಲೀಲಾ ವಿಚಿತ್ರದ ಕಥಾಮೃತವು ಹೊರಬಿದ್ದು ಬೇಕಾದವರು ಸ್ವೀಕರಿಸಬಹುದೆಂದು ಮುಕ್ತ ದ್ವಾರವಾಗಿದ್ದರೂ ಅದು ನಮ್ಮಂಥ ಭವರೋಗಿಗಳಿಗೆ ಕರ್ಣಕಠೋರವಾದ ಕಹಿ ಔಷಧವಾಗುವದು. ಇದಕ್ಕೆ ಉಪಾಯವೆನ್ನೇನು? ಕಳಕೊಂಡು ಹುಡುಕುವಂತೆ

ಆಯುಷ್ಯವೂ, ಇಂದ್ರಿಯಗಳ ಸಾಮರ್ಥ್ಯವೂ ಗಳಿತವಾಗಿ ನಿರ್ವಿಣ್ಯವಾದಾಗ್ಗೆ (ಪಾರಾಗುವ) ಮುಂದಿನ ಯೋಚನೆಯು ಅಕಸ್ಮಾತ್ ಬಂದರೆ, ಒಮ್ಮೆಲೇ ಎದೆ ಧಸ್ಸೆಂದು ಉಸುರುಗರೆಯುವೆವು; ಆಗ್ಗೆ "ಅಯ್ಯೋ, ನನ್ನ ಜನ್ಮಕ್ಕೆ ಧಿಕ್ಕಾರ ಇರಲಿ! ಈ ಮೊದಲಿಗೇ ನಾನೇಕೆ ಪುಣ್ಯ ಸಂಪಾದಿಸಿರಲಿಕ್ಕಿಲ್ಲ? ಈ ಆಪತ್ಕಾಲಕ್ಕೆ ನನ್ನನ್ನು ತಾರಿಸುವಂಥ ಅಮೌಲ್ಯವಾದ ಪುಣ್ಯವು ಹೇಗೆ ಬಂದೊದಗೀತು! ಮೊದಲಿಗೇ ಸಂಗ್ರಹಿಸಿಡದ ನನಗೆ ಅದು ಪುಕ್ಕಟೆಯಾಗಿ ದೊರೆಯಬಹುದೇ? ಅಯ್ಯೋ ಕೆಟ್ಟೆನು! ಕೆಟ್ಟೆನು!!" ಎಂದು ಮರಮರನೆ ಮರಗುತ್ತಲಿದ್ದು ಸಾಯುವ ಸಮಯಕ್ಕೆ ಆ ಭಗವಂತನ ಆಜ್ಞಾನುಸಾರ ಜೀವಾತ್ಮನನ್ನು ಕರೆದೊಯ್ಯಲಿಕ್ಕೆ ಬಂದಂಥ ಅಂತಕನಾಳುಗಳ ಆ ಭಯಂಕರ ರೂಪಕ್ಕೆ ಬೆದರಿ ಚೀರುತ್ತ ಎಷ್ಟು ಒದ್ದಾಡಿದರೂ ಬಿಡಿಸುವವರು, ನಮ್ಮವರು (ರಕ್ಷಕರು) ಯಾರೂ ನೆರವಾಗುವದಿಲ್ಲ. ಇಂಥ ಶಕ್ತಿಯು ನಮ್ಮ ನಮ್ಮ ಸುಕೃತದಲ್ಲಿಯೇ ಇರುತ್ತದಲ್ಲದೆ ಬೇರೆ ಇರಲಿಕ್ಕೆ ಶಕ್ಯವಿಲ್ಲವು. ಇದಕ್ಕೆ ಕನ್ನಡ ಕವಿಯೋರ್ವನು:—

|| ಕಂದ ಪದ್ಯದಿಂದ ||

ಪುಣ್ಯಂಗೆಯ್ಯದ ಪಾಪಿಗೆ | ಪುಣ್ಯಂ ಬಳಿಕೇಕೆ ಮರುಗಿ ಕುವಿದೊಡೆ ಬರ್ಕುಂ? || ಪುಣ್ಯದೊಳು ತೊಡರುಬೇಗಂ | ಪುಣ್ಯಂ ಶ್ರೇಷ್ಠಂ ತಿಳಿಯಲೆ ಜನ ಮುನಿತನಯಾ || ೧ ||—ಎಂದು ಹೇಳಿಕೊಂಡಿದ್ದಾನೆ.

ಇನ್ನು ಈ ಕೀರ್ತನ ಕಾರ್ಯಕ್ಕೆ ಎಂಥವರು ಯೋಗ್ಯರೆಂದರೆ:—ಒಂದು ಉದಾಹರಣೆಯಿಂದ ಸಿದ್ಧಮಾಡಿಕೊಳ್ಳಬಹುದು. ಬೇನೆ ಬಿದ್ದವರಿಗೆ ಔಷಧ ಕೊಡಬೇಕೆಂದು ಅನನುಭವಿಕರನ್ನು ಕರೆತಂದರೆ, ಅವರು ಅಜ್ಞಾನದಿಂದ ಕೊಡುತ್ತಿರುವ ಔಷಧಕ್ಕೂ ಇರತಕ್ಕ ಬೇನೆಗೂ ಏನೂ ಸಂಬಂಧವಾಗದೆ ಪರಿಣಾಮವು ಮಾತ್ರ ಮೊದಲಿಗಿಂತ ಹೀನಾವಸ್ಥೆಗೆ ಬರುತ್ತದೆ. ಅದರಂತೆ ಈ ಭವರೋಗಕ್ಕೆ ಶ್ರೀ ಭಗವಂತನ ಲೀಲಾಮಾಲೆಯನ್ನು ಅಂತಃಕರಣ ಶುದ್ಧತೆಯಿಂದ ವಿವರಿಸಿ ಕಳಕಳಿಯನ್ನು ಹೇಳುವವರಲ್ಲಿಯೂ, ಕೇಳುವವರಲ್ಲಿಯೂ ಹುಟ್ಟಿಸಿ, ಆಯಾ ಪ್ರಸಂಗಕ್ಕನುಸರಿಸಿ ಭಕ್ತಿರಸದ ಪ್ರವಾಹವು ಉಕ್ಕೇರಿ ನೇತ್ರದೊಳಗಿಂದ ಹೊರಬಿದ್ದು (ಬಹಿರಂಗಕ್ಕೆ) ಆನಂದಬಾಷ್ಪವಾಗಿ ಪರಿಣಮಿಸಬೇಕು.

ಈ ತರದ ಭಕ್ತಿಯುಳ್ಳವರೇ ಕೀರ್ತನ ಮಾಡಲಿಕ್ಕೆ ತಕ್ಕವರು. ಇಂಥವರೇ ಸಾಧುವಳು. ಇಂಥವರೇ ದರ್ಶನಕ್ಕೆ ಯೋಗ್ಯರು. ಈ ವಿಷಯದಲ್ಲಿ ಒಬ್ಬ ಕನ್ನಡಿಗನು:—

ಪಾಪವ ಗಂಗೆ ಕುರಂಗಧರಂ | ತಾಪವದೈನ್ಯವ ಕಲ್ಪ ಕುಜಂ ||
ಲೋಪಿಕುಮುತ್ತಮ ಸಂಗಮುವಾ | ಪಾಪವ ತಾಪವ ದೈನ್ಯಮುಮಂ ||

ಎಂದು ಹೇಳಿದ್ದಾನೆ. ಆದ್ದರಿಂದ ಈ ತರದ ಭಗವದ್ಭಕ್ತರು ದೇಶೋದ್ಧಾರಕ್ಕೋಸ್ಕರ ಊರೂರು ತಿರುಗುತ್ತ, ಕೀರ್ತನ, ಭಜನೆ ಮೊದಲಾದವುಗಳಿಂದ ಉಭಯತರು ಆನಂದದಲ್ಲಿರುವಂತೆ ಮಾಡುವರು. ಇವರೇ ಧನ್ಯರು!!

ಈ ತರದ ಭಗವದ್ಭಕ್ತರಲ್ಲಿ ಒಬ್ಬರಾದ, ಈ ಮಾಲತೀಶ ಚರಿತ್ರವನ್ನು ಕೀರ್ತನರೂಪಕ್ಕೆ ತಂದು ಜಗತ್ಕಲ್ಯಾಣ ಮಾಡಿದ ನಮ್ಮ ಪರಮ ಪ್ರಿಯರಾದ ಶ್ರೀಯುತ ರಾಮದಾಸ ತೋಸೀಖಾನಿ, ಹಾನಗಲ್ಲ ಎಂಬ ಪುಣ್ಯಾತ್ಮರು ತಮಗೆ ಪರಮಾತ್ಮನಿಂದ ದೊರೆತ ಅಮೌಲ್ಯ ಜ್ಞಾನವನ್ನು ಆತನ ಪಾದಾರವಿಂದಕ್ಕರ್ಪಿಸಿ ಋಣಮುಕ್ತರಾದರು. ಇವರಿಂದ ಅತ್ಯಗಾಧವಾದ ಕಾರ್ಯಮಾಡಿಸಿ ತನ್ನ ಮಹಿಮೆಯನ್ನು ಆ ವ್ಯಕ್ತಿಯ ಮುಖಾಂತರ ಜಗತ್ತಿನ ಶ್ರೋತೃಗಳಿಗೆ ಶ್ರುತಪಡಿಸಿದ ಆ ಪ್ರಭುವಿನ ದಯಾಳುತ್ವವನ್ನು ಎಷ್ಟು ವರ್ಣಿಸಿದರೂ ತೀರದು. "ಸರ್ವೇಜನಾಃ ಸುಖಿನೋ ಭವಂತು" ಎಂದು ಭಗವಂತನನ್ನು ಪ್ರಾರ್ಥಿಸಿ, ಈ ಬರಹವನ್ನು ಮುಗಿಸುತ್ತೇನೆ.

ತಮ್ಮೆಲ್ಲರ ಸೇವಕ,
ಮುರಹರ ರಾಮಚಂದ್ರ ಶಿವಪೂಜಿ,
ಶ್ರೀ ಮಾಲತೀಶಾರ್ಚಕ ದೇವಗಿರಿ.

---

|| ಶ್ರೀ ಜಗಚ್ಚಾಲಕಾಯನಮಃ ||



# ಶ್ರೀ ಮಲ್ಲಾರಿ ಮಾಹಾತ್ಮ್ಯ ಕೀರ್ತನವು.



## ಪೂರ್ವರಂಗ ನಿರೂಪಣ.

---




ಗಣೇಶಾಯನಮಃ ಶ್ರೀ ಗುರುಭ್ಯೋನಮಃ || ಅಗಜಾನನ ಪದ್ಮಾರ್ಕಂ ಗಜಾನನ ಮಹರ್ನಿಶಂ | ಅನೇಕ ದಂತಂ ಭಕ್ತಾ ನಾಮೇಕದಂತಮುಪಾಸ್ಮಹೆ || ಯಾಕುಂದೇಂದು ತುಷಾರ ಹಾರ ಧವಳಾ ಯಾ ಶುಭ್ರವಸ್ತ್ರಾವೃತಾ | ಯಾ ವೀಣಾ ವರ ದಂಡ ಮಂಡಿತ ಕರಾ ಯಾ ಶ್ವೇತ ಪದ್ಮಾಸನಾ || ಯಾ ಬ್ರಹ್ಮಾಚ್ಯುತ ಶಂಕರ ಪ್ರಭೃತಿಭಿರ್ದೇವೈ ಸದಾ ವಂದಿತಾ | ಸಾಮಾಂ ಪಾತು ಸರಸ್ವತೀ ಭಗವತೀ ನಿಃಶೇಷ ಜಾಡ್ಯಾಪಹಾ || ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೆ ಗಿರಿಂ || ಯತ್ಕೃಪಾತಮಹಂ ವಂದೇ ಪರಮಾನಂದ ಮಾಧವಂ || ಮಲ್ಲಾರಿಂ ಜಗತಾಂ ನಾಥಂ ತ್ರಿಪುರಾರಿಂ ಜಗದ್ಗುರುಂ | ಮಣಿ ಘ್ನಂ ಮ್ಹಾಲಸಾಕಾಂತಂ ವಂದೇಹಂ ಕುಲದೈವತಂ || ಗುರುರ್ಬ್ರಹ್ಮಾ ಗುರು ರ್ವಿಷ್ಣು ಗುರುರ್ದೇವೋ ಮಹೇಶ್ವರಃ || ಗುರುರೇವ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ||

ಜಯ ಪುಂಡರೀಕ ವರದ ಹರಿ ವಿಠ್ಠಲ! ಸೀತಾಕಾಂತ ಸ್ಮರಣ
ಜಯ ಜಯರಾಮ!! ನಮಃಪಾರ್ವತೀಪತಯೇ ಹರ
ಹರ ಮಹಾದೇವ! ಶ್ರೀ ಗುರುದೇವ ದತ್ತ!!!

ಇತಿ ನಮನಂ.

ಕೀರ್ತನಾರಂಭದಲ್ಲಿ ಅಪರೋಕ್ಷ ಸಾಕ್ಷಾತ್ಕಾರವುಳ್ಳ ಸತ್ಪುರುಷರು ಭವ ಪಾಶದಲ್ಲಿ ಸಿಕ್ಕು ಕಷ್ಟಪಡುವವರನ್ನು ನೋಡಿ ಮನಮರುಗಿ, ಅವರನ್ನು ಉದ್ಧರಿಸಲು ಸನ್ಮಾರ್ಗ ದರ್ಶಕವಾದ ಉಪದೇಶವನ್ನು ಮಾಡಬೇಕೆಂದು ಯೋಚಿಸುವಷ್ಟರಲ್ಲಿ, ಈ ಜಗತ್ತಿನಲ್ಲಿ ಕೆಲ ಕೆಲವು ವಿಶಿಷ್ಟ ವ್ಯಕ್ತಿಗಳಲ್ಲಿರುವ ಪರಸ್ಪರ ವಿರೋಧ ಭಾವವು ಅವರ ಸದುದ್ದೇಶಕ್ಕೆ ಅಡ್ಡ ಬರಹತ್ತಿತು. ಇಂಥ ಪರಸ್ಪರ ವಿರೋಧ ಭಾವವು ಯಾವದೆಂದರೆ:—

ಲುಬ್ಧಾನಾಂ ಯಾಚಕಃಶತ್ರು ಶ್ಚೋರಾಣಾಂ ಚಂದ್ರಮಾರಿಪುಃ ||
ಜಾರಸ್ತ್ರೀಣಾಂ ಪತಿಃಶತ್ರುರ್ಮೂರ್ಖಾಣಾಂ ಬೋಧಕೋರಿಪುಃ ||೧||

ದ್ರವ್ಯದ ಮೇಲೆ ನೆಲೆಗೆಟ್ಟ ಲೋಭವಿರುವ ಕೃಪಣರಿಗೆ ಯಾಚಕನು ಶತ್ರುಸ್ವರೂಪನಾಗಿ ತೋರುವನು; ಯಾಕಂದರೆ ಆ ಯಾಚಕನು ಪ್ರಾಣಕ್ಕಿಂತಲೂ ಪ್ರಿಯಕರವಾಗಿರುವ ಧನವನ್ನು ಯಾಚಿಸಲಿಕ್ಕೆ ಬಂದಿರುವನು. ಸರ್ವಪ್ರಾಣಿಗಳಿಗೂ ಆನಂದವನ್ನು ಬೀರುವ ಚಂದ್ರಿಕೆಯು, ಕಳ್ಳರಿಗೆ ಪ್ರತಿಬಂಧಕವಾಗುವದರಿಂದ ಚಂದ್ರನು ಕಳ್ಳರಿಗೆ ವೈರಿಯಂತೆ ಕಾಣುವನು. ಅದರಂತೆ, ಹಾದರಗಿತ್ತಿಗೆ ಗಂಡನೂ, ಮೂರ್ಖರಿಗೆ ಬೋಧಕರೂ ಶತ್ರುಸ್ವರೂಪರಾಗಿ ತೋರುವರು. ಸತ್ಪುರುಷರ ಉಪದೇಶವು ಪ್ರಾಮುಖ್ಯವಾಗಿ ಮೂರ್ಖರ ಸಲುವಾಗಿಯೇ ಇರುವದರಿಂದ, ತಮ್ಮ ಉಪದೇಶದ ಪರಿಣಾಮವು ಮೂರ್ಖರ ಹಟಮಾರಿತನದಿಂದ ವಿಪರೀತವಾಗುವ ಸಂಭವವೇ ವಿಶೇಷವಿರುವದರಿಂದ, ಅಂಥ ಮೂರ್ಖರಿಗೆ ಪ್ರತ್ಯಕ್ಷ ಉಪದೇಶ ಮಾಡುವದರ ಬದಲಾಗಿ, ತಮ್ಮ ದೇಹಕ್ಕೆ ಸಮ್ಮಂಧಿಸಿದ ಯಾವದಾದರೊಂದು ಭಾಗಕ್ಕೆ ಉಪದೇಶಮಾಡಿ, ತದ್ವಾರಾ ತಮ್ಮ ಉದ್ದೇಶವನ್ನು ಅಪ್ರತ್ಯಕ್ಷವಾಗಿ ಸಾಧಿಸಿಕೊಳ್ಳಬೇಕೆಂದು, ಅವರು ತಮ್ಮ ಮನಸಿಗೆ ಉಪದೇಶಿಸುವದೇನಂದರೆ:—

ರಾಗ—ಕಾಪಿ. ತಾಳ—ಆದಿ.

ಭಾವವೆ ಕೇಳ್ಮನ ಮುಕುತಿ ಜೀವಾಳ || ಭವಾನೀಧವ ಭವನಲಿನೆಲಿಸಿದ ಸದ್||ಪ||
ವನಿತೆಯ ಮೋಹವು ಮರುಳು ಗೈಯುತ | ಜನುಮನಿತ್ತು ಘನ ಮಮತೆಲಿ ಪೊರೆದ | ಜನನಿ-ಜನಕರನು ತೊರೆಸುತ ನಿನ್ನನು | ಘನ ರೌರವಕೆಳೆಯುಯುವ ಪಾಶವ್ರೊ ಕೇಳ್ ||೧|| ದೊರೆಯಲೊಂದು ಮತ್ತೊಂದನೆ ಬಯಸುತ | ದೊರೆದುದ ನೆಂದಿಗು ಬಿಡದಲೆ ಪರರ || ಸಿರಿ ಬಯಕೆಯು ಮಿತಿಯರಿಯದಾಶೆಯು | ಉರುಲದ ರೊಳು ಸುಖವಿಲ್ಲವೊ ಮರುಳೆ ||೨|| ಸ್ಥಿರವಿಲ್ಲದ ಸಿರಿ-ನಾರಿ ಮೋಹವ | ಹರಿ

ದೊಗೆಯುತ ವಿರತಿಯನೆ ಪೊಂದುತ || ಹರ ಚರಣವಿ ಸ್ಥಿರವಾಗಿ ನಿಲ್ಲೆ ನೀ |
ವರ ಮುಕುತಿಯು ಕರತಲಾಮಲಕವೋ ||೩||

ಇನ್ನು ಎಲ್ಲ ಕರ್ಮೇಂದ್ರಿಯ ಮತ್ತು ಜ್ಞಾನೇಂದ್ರಿಯಗಳಲ್ಲಿ ಮನಸ್ಸಿಗೇ ಮಹತ್ವವನ್ನು ಕೊಟ್ಟು ಉಪದೇಶ ಮಾಡಿದ ಕಾರಣವೇನಂದರೆ:—ಈ ಮನಸ್ಸು ಅತಿಶಯ ಚಂಚಲವಾಗಿರುವದರಿಂದಲೂ ಮತ್ತು ಸರ್ವ ಕರ್ಮಗಳೂ ಮನಸ್ಸನ್ನೇ ಆಶ್ರಯಿಸಿ ನಡೆಯಬೇಕಾಗಿರುವದರಿಂದಲೂ, ಇದಕ್ಕೆ ಅಷ್ಟು ಮಹತ್ವ ಕೊಡಬೇಕಾಯಿತು. ಮನಸ್ಸಿನಷ್ಟು ಚಂಚಲ ವಸ್ತುವು ಜಗತ್ತಿನಲ್ಲಿ ಇನ್ನಾವದೂ ಇರುವದಿಲ್ಲ.

ಮನೋ ಮಧುಕರೋ ಮೇಘೋ ಮಾನಿನೀ ಮದನೋ ಮರುತ್ ||
ಮಾ ಮದೋ ಮರ್ಕಟೋ ಮತ್ಸ್ಯೋ ಮಕಾರಾ ದಶ ಚಂಚಲಾಃ ||೧||

ಮೇಲ್ಕಂಡ ಹತ್ತೂ ವಸ್ತುಗಳು ಚಂಚಲವಿರುವವು; ಆದರೆ ಅವುಗಳಲ್ಲಿ ಅಗ್ರಸ್ಥಾನವು ಮನಸ್ಸಿಗೇ ಸಿಕ್ಕಿರುವದೆಂದ ಮೇಲೆ ಕೇಳುವದೇನು? ಆದರೂ ಈ ಚಂಚಲವಾದ ಮನಸ್ಸೇ ಮನುಷ್ಯನ ಬಂಧನಕ್ಕೂ ಮೋಕ್ಷಕ್ಕೂ ಕಾರಣೀಭೂತವಾಗಿರುವದು. ಅಂದರೆ ಮನುಷ್ಯನಿಗೆ ಮೋಕ್ಷವು ದೊರೆಯುವದೂ ಬಿಡುವದೂ ಈ ಚಂಚಲವಾದ ಮನಸ್ಸಿನ ಮೇಲೆಯೇ ಅವಲಂಬಿಸಿರುವದು.

ಅಮೃತಬಿಂದು ಉಪನಿಷತ್ತಿನಲ್ಲಿ:—

ಮನ ಏವ ಮನುಷ್ಯಾಣಾಂ ಕಾರಣಂ ಬಂಧ ಮೋಕ್ಷಯೋಃ ||
ಬಂಧಾಯ ವಿಷಯಾಸಕ್ತಂ ಮುಕ್ತ್ಯೈ ನಿರ್ವಿಷಯಂ ಸ್ಮೃತಂ ||೧||

ಅಂದರೆ ವಿಷಯಾಸಕ್ತವಾದ ಮನಸ್ಸು ಮನುಷ್ಯನ ಬಂಧನಕ್ಕೂ, ವಿರಕ್ತಿಯನ್ನು ಹೊಂದಿದ ಮನಸ್ಸು ಮೋಕ್ಷಕ್ಕೂ ಸಾಧನವಾಗುವದೆಂದು ಹೇಳಿರುವದು. ಮನಸ್ಸಿನಲ್ಲಿಯ ವಿಷಯಧ್ಯಾನವೇ ಮನುಷ್ಯನ ಸರ್ವ ನಾಶಕ್ಕೆ ಮೂಲವಾಗಿರುವದು. ಭಗವದ್ಗೀತೆಯ ೨ನೆಯ ಅಧ್ಯಾಯ ೬೨ನೆಯ ಶ್ಲೋಕದಲ್ಲಿ ಹೇಳಿರುವದೇನಂದರೆ:

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೆ ||
ಸಂಗಾತ್ಸಂಜಾಯತೆ ಕಾಮಃ ಕಾಮಾತ್ ಕ್ರೋಧೋಭಿಜಾಯತೆ ||೧||
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿ ವಿಭ್ರಮಃ ||
ಸ್ಮೃತಿ ಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ||೨||

ಮನಸ್ಸಿನಲ್ಲಿ ವಿಷಯಧ್ಯಾನವು ಉಂಟಾಯಿತೆಂದರೆ, ಧ್ಯಾನ ಮಾಡುವ ಮನುಷ್ಯನಿಗೂ, ವಿಷಯಕ್ಕೂ ಸಂಬಂಧವಾಗಿ ಪದೇ ಪದೇ ವಿಷಯೇಚ್ಛೆಯೇ ಅವನಲ್ಲಿ

ಉತ್ಪನ್ನವಾಗಹತ್ತುವದು; ಮತ್ತು ಅಂಥ ವಿಷಯೇಚ್ಛೆಯ ಪೂರ್ಣತೆಗೆ ಏನಾದರೂ ವಿಘ್ನವುಂಟಾಯಿತೆಂದರೆ ಕ್ರೋಧವು ಬರುವದು. ಕ್ರೋಧವು ಬಂತೆಂದರೆ ಮನಸ್ಸಿಗೆ ಸಾರಾಸಾರ ವಿಚಾರಶೂನ್ಯವಾದ ಒಂದು ವಿಧದ ಅಮಲೇ ಬಂದಂತಾಗಿ ಸ್ಮೃತಿ ತಪ್ಪುವದು. ಸ್ಮೃತಿಗೆಟ್ಟ ಮನುಷ್ಯನ ಬುದ್ಧಿಯು ನಾಶವಾಗಿ ಅವನೂ ನಾಶಹೊಂದುವನು. ಏವಂಚ, ಇಷ್ಟೆಲ್ಲ ಅನರ್ಥಕ್ಕೂ ವಿಷಯಚಿಂತನೆಯೇ ಮೂಲಕಾರಣವಿದ್ದು, ಅದು ಮನಸ್ಸನ್ನೇ ಆಶ್ರಯಿಸಿರುವದರಿಂದ, ಜ್ಞಾನಿಗಳು ಮನಸ್ಸಿಗೇ ಮಹತ್ವಕೊಟ್ಟು ಕೀರ್ತನಾರಂಭದಲ್ಲಿ ಅದಕ್ಕೆ ಉಪದೇಶ ಮಾಡಿರುವದೇನಂದರೆ:—

ಭಾವವೆ ಕೇಳ್ಮನ ಮುಕುತಿ ಜೀವಾಳ | ಭವಾನೀಧವ ಭವನಲಿ ನೆಲಸಿದ ಸದ್ ||

ಯಾವದೇ ಕರ್ಮವನ್ನು ಮಾಡುವದಕ್ಕೂ ಮನಸ್ಸೇ ಮುಖ್ಯ ಸಾಧನವು. ಕರಣತ್ರಯಗಳಲ್ಲಿ(ಮನಸಾ, ಕರ್ಮಣಾ, ವಾಚಾ)ಮನಸ್ಸಿಗೇ ಅಗ್ರಸ್ಥಾನವು ಇರುವದು.

ಮನಃಕೃತಂ ಕೃತಂ ಕರ್ಮ ನಶರೀರಕೃತಂ ಕೃತಂ ||
ಯೇನೈವಾಲಿಂಗಿತಾಕಾಂತಾ ತೇನೈವಾಲಿಂಗಿತಾಸುತಾ ||೧||

ಎಂಬಂತೆ ಕ್ರಿಯೆಯು ಒಂದೇ ಪ್ರಕಾರದ್ದಿದ್ದರೂ ಅದರ ಸ್ವರೂಪವು ಮನಸ್ಸಿನ ಮೇಲೆ ಅವಲಂಬಿಸಿರುವದು. ಆಲಿಂಗನ ಕ್ರಿಯೆಯು ಒಂದೇ ಆಗಿದ್ದರೂ ಸ್ವಸ್ತ್ರೀಯನ್ನು ಆಲಿಂಗನ ಮಾಡಿಕೊಳ್ಳುವದರಲ್ಲಿಯೂ, ಪುತ್ರಿಯನ್ನು ಆಲಿಂಗನ ಮಾಡಿಕೊಳ್ಳುವದರಲ್ಲಿಯೂ ಮಹದಂತರವಿರುವದಲ್ಲವೆ? ಹಾಗೆಯೇ, ಮನಃಪೂರ್ವಕವಾಗಿ ಮಾಡದೇ ಇರುವ ಕರ್ಮದ ಫಲವು ಕರ್ತೃವನ್ನು ವಿಶೇಷವಾಗಿ ಬಾಧಿಸಲಾರದು. ಅದೇ ಮನಃಪೂರ್ವಕವಾಗಿ ಮಾಡಿದ ದುಷ್ಕರ್ಮಕ್ಕೆ ಪ್ರಾಯಶ್ಚಿತ್ತವೇ ಇಲ್ಲದೆ ಅದು ವಜ್ರಲೇಪವಾಗುವದು. ಆದ್ದರಿಂದಲೇ ಕೀರ್ತನಾರಂಭದಲ್ಲಿ ಜ್ಞಾನಿಗಳು "ಸಾಕ್ಷಾತ್ ಭವಾನೀಪತಿಯಾದ ಸಚ್ಚಿದಾನಂದಸ್ವರೂಪನಾದ ಪರಮೇಶ್ವರನಲ್ಲಿ ನೆಲೆಗೊಂಡಿರುವ ಸದ್ಭಾವನೆಯೇ ಮುಕ್ತಿಯ ಜೀವಾಳ"ವೆಂದು ಮನಸ್ಸಿಗೇ ಉಪದೇಶ ಮಾಡಿರುವರು.

ಇನ್ನು ಪರಮಾತ್ಮನ ಪಾದಾರವಿಂದದಲ್ಲಿರುವ ಸದ್ಭಾವನೆಗೆ ಭಕ್ತಿಯೆಂದೆನ್ನುವರು. ಭಕ್ತಿಯೇ ಮುಕ್ತಿಯ ಜೀವಾಳವು; ಯಾಕಂದರೆ ಪರಮಾತ್ಮನು ಭಕ್ತಿಗೆ ವಶನಾದಂತೆ ಇನ್ನಾವುದಕ್ಕೂ ವಶನಾಗುವದಿಲ್ಲ. ಭಾಗವತದಲ್ಲಿ ಪರಮಾತ್ಮನು ಉದ್ಧವನನ್ನು ಕುರಿತು ಹೇಳಿರುವದೇನಂದರೆ: —

ನ ಸಾಧಯತಿ ಮಾಂ ಯೋಗೋ ನ ಸಾಂಖ್ಯಂ ಧರ್ಮ ಉದ್ಧವ ||

ನ ಸ್ವಾಧ್ಯಾಯಸ್ತ ಸಸ್ತ್ಯಾಗೋ ಯಥಾ ಭಕ್ತಿರ್ಮಮೋರ್ಜಿತಾ ||೧||
ಹೇ ಉದ್ಧವ, ಶ್ರೇಷ್ಠವಾದ ಭಕ್ತಿಗೆ ನಾನು ಹೇಗೆ ವಶ್ಯನೋ ಹಾಗೆ ಯೋಗ (ಚಿತ್ತವೃತ್ತಿನಿರೋಧ) ದಿಂದಾಗಲಿ, ಸಾಂಖ್ಯ (ಪ್ರಕೃತಿ ಪುರುಷ ವಿಚಾರಾತ್ಮಕ) ಶಾಸ್ತ್ರಾಧ್ಯಯನದಿಂದಾಗಲಿ ವಶನಾಗುವದಿಲ್ಲ. ಹಾಗೆಯೇ ಧರ್ಮ (ವರ್ಣಾಶ್ರಮ ವಿಹಿತ ವೇದೋಕ್ತ ಆಚರಣೆ) ದಿಂದಾಗಲಿ, ಸ್ವಾಧ್ಯಾಯ (ವೇದಾಧ್ಯಯನ)ದಿಂದಾಗಲಿ, ತಪಸ್ಸಿನಿಂದಾಗಲಿ, ಇಲ್ಲವೆ ತ್ಯಾಗ (ಸನ್ಯಾಸ) ದಿಂದಾಗಲಿ ವಶನಾಗುವದಿಲ್ಲ. ಅಂದಮೇಲೆ ದೇವರು ಭಕ್ತಿಗೇ ಮುಖ್ಯವಾಗಿ ಒಲಿಯುವನೆಂದಂತಾಯಿತು. ಅದಕ್ಕಂತೇ ಕೀರ್ತನಾರಂಭದಲ್ಲಿ "ಭಕ್ತಿಯೇ ಮುಕ್ತಿಯ ಜೀವಾಳ"ವೆಂದು ಮನಸ್ಸಿಗೆ ಉಪದೇಶಿಸಿರುವರು.

ಶ್ರೀ ಮತ್ ಶಂಕರಾಚಾರ್ಯರವರು ತಮ್ಮ "ಶಿವಾನಂದ ಲಹರಿ"ಯಲ್ಲಿ ಮನಸ್ಸನ್ನು ಭಕ್ತಿಯಿಂದಲೇ ಕಟ್ಟಬೇಕೆಂದು ಪರಮೇಶ್ವರನನ್ನು ಬೇಡಿಕೊಂಡಿರುವರು. ಯಾಕಂದರೆ ಮಂಗನಂತಿರುವ ಮನಸ್ಸನ್ನು ಸ್ವೇಚ್ಛೆಯಾಗಿ ಬಿಟ್ಟರೆ ಅದು ಮನುಷ್ಯನನ್ನು ಪೂರ್ಣವಾಗಿ ಅಧಃಪತನಮಾಡದೆ ಇರುವದಿಲ್ಲ.

ಸದಾಮೋಹಾಟವ್ಯಾಂಚರತಿ ಯುವತೀನಾಂ ಕುಚಗಿಕಾ |
ನಟತ್ಯಾಶಾಶಾಖಾಸ್ವಟತಿ ಝಟತಿ ಸ್ವೈರಮಭಿತಃ ||
ಕಪಾಲಿನ್ ಭಿಕ್ಷೋ ಮೇ ಹೃದಯಕಪಿಮತ್ಯಂತಚಪಲಂ |
ದೃಢಂ ಭಕ್ತ್ಯಾ ಬದ್ಧ್ವಾ ಶಿವಭವದಧೀನಂ ಕುರುವಿಭೋ ||೧||

"ಹೇ ಕಪಾಲವನ್ನು ಪಿಡಿದು ಭಿಕ್ಷೆಬೇಡುವ ಪ್ರಭುವೇ! ಶಂಕರನೆ, ನಾನು ನಿನಗೊಂದು ಪದಾರ್ಥವನ್ನು ಕೊಡಬೇಕೆಂದಿರುವೆನು. ತಕ್ಕೊಳ್ಳುವಿಯಷ್ಟೇ? ಯಾಕಂದರೆ ನೀನು ಭಿಕ್ಷುಕನಿದ್ದು, ಕೊಟ್ಟದ್ದನ್ನು ತಕ್ಕೊಳ್ಳುವದು ನಿನ್ನ ಧರ್ಮವು. ಮೇಲಾಗಿ ನಾನು ಕೊಡುವ ವಸ್ತುವು ನಿನ್ನ ಕೆಲಸಕ್ಕೆ ಬಹಳ ಅನುಕೂಲವಾಗುವದಲ್ಲದೆ ನನಗೂ ಅದರ ಕಾಟ ತಪ್ಪುವದು. ಅದ್ಯಾವದೆಂದರೆ: ನನ್ನ ಮನಸ್ಸೆಂಬ ಮಂಗವು. ಇದು ಯಾವಾಗಲೂ ಮೋಹವೆಂಬ ಅಡವಿಯಲ್ಲಿ, ತರುಣಿಯರ ಸ್ತನಗಳೆಂಬ ಗುಡ್ಡಗಳಲ್ಲಿ ತಿರುಗುತ್ತ ಆಶಾವೃಕ್ಷದ ಟೊಂಗೆಗಳಲ್ಲಿ ಸ್ವೇಚ್ಛೆಯಾಗಿ ಜಿಗಿದಾಡುತ್ತಿರುವದು. ನಾನು ಎಷ್ಟು ಹೇಳಿದರೂ ಕೇಳುವದಿಲ್ಲ. ಇದನ್ನು ನೀನು ಸಂಗಡ ತಕ್ಕೊಂಡು ಆಡಿಸುತ್ತ ಹೋದರೆ, ಬೀದಿಯಲ್ಲಿಯ ಹುಡುಗರೆಲ್ಲರೂ ನೆರೆದು, ಹಿರಿಯರು ಬೇಡೆಂದರೂ ಕೇಳದೆ, ನಿನಗೆ ಭಿಕ್ಷವನ್ನು ಹಾಕುವರು. ಸುಮ್ಮನೆ ಬರೆ ಕಪಾಲ ಧರಿಸಿಕೊಂಡು ಹೋದರೆ ನಿನ್ನನ್ನು

ಯಾರು ಕೇಳುವರು? ಆದರೆ ಈ ಮಂಗವು ಬಹಳ ಚಪಲವಿರುವದರಿಂದ ಕೈ-ಬಿಟ್ಟರೆ ಪುನಃ ಸಿಗಲಾರದು; ಆದ್ದರಿಂದ ಇದನ್ನು ನಿನ್ನ ಪಾದಭಕ್ತಿಯೆಂಬ ಹಗ್ಗದಿಂದ ಗಟ್ಟಿಯಾಗಿ ಬಿಗಿದು, ಹಿಡಿದುಕೊಂಡು ಹೋಗು'' ಎಂದು ಬೇಡಿಕೊಂಡಿರುವರು. ಅಂದರೆ ಮನಸ್ಸನ್ನು ಭಕ್ತಿಯೆಂಬ ಹಗ್ಗದಿಂದ ಗಟ್ಟಿಯಾಗಿ ಬಿಗಿಯಬೇಕೆಂದು ಹೇಳಿರುವರು. ಯಾಕಂದರೆ ಭಕ್ತಿಯೇ ಮುಕ್ತಿಯ ಜೀವಾಳವು.

ಇನ್ನು ಪರಮಾತ್ಮನಲ್ಲಿ ಭಕ್ತಿಯನ್ನಿಡುವದು ಹೇಗೆ ಎಂಬ ವಿಷಯದಲ್ಲಿ ಹೇಳುವದೆಂದರೆ:-ಅಪ್ಪಗಳಿರಾ, ಭಕ್ತಿಯೆಂಬುವದರಲ್ಲಿ ಮನಸ್ಸಿನ ವಿಲಕ್ಷಣ ಅವಸ್ಥೆಯೇನೂ ಇರುವದಿಲ್ಲ. ಉದ್ದಿಷ್ಟಸ್ಥಾನ ಮಾತ್ರ ಬೇರೆಯಿರುವದು. ಭಕ್ತಿಯೆಂಬುವದು ನಮಗೆ ಅರಿಯದ ವಿಷಯುವಲ್ಲ. ಹೇಗಂದರೆ:—

ಭಾ.ಷ. ಧನಿಕನಲಿ ಯಾಚಕನು ಸುಂದರ | ವನಿತೆಯಲಿ ಕಾಮುಕನು ತಮ್ಮಯ |
ತನುಜರಲಿ ಸ್ವಾರ್ಥಾಭಿಲಾಷೆಯ ಜನಕ ಜನನಿಯರು ||
ಧನವಿಭೂಷಿತ ವಿಟಗೆ ವಾರಾಂ-| ಗನೆಯು ತೋರ್ಪಾದರದ ಭಕ್ತಿಯ |
ದನುಜಹರನಲ್ಲಿರಿಸೆ ಮುಕ್ತಿಯು ಕರದಲಿದ್ದಂತೆ ||೧||

ಧನಿಕರಲ್ಲಿ ಯಾಚಕರೂ, ಸುಂದರ ಸ್ತ್ರೀಯರಲ್ಲಿ ಕಾಮುಕರೂ, ತಮ್ಮನ್ನು ಮುಪ್ಪಿನಕಾಲಕ್ಕೆ ಪೋಷಿಸಬೇಕೆಂಬ ಸ್ವಾರ್ಥದಿಂದ ಪ್ರೇರಿತರಾದ ತಂದೆ-ತಾಯಿಗಳು ತಮ್ಮ ಮಕ್ಕಳಲ್ಲೂ, ಅಮೌಲ್ಯ ಕನಕಾಭರಣಗಳಿಂದಲಂಕೃತನಾದ ವಿಟನ ದ್ರವ್ಯಹರಣಮಾಡಲೋಸುಗ ವಾರಾಂಗನೆಯೂ ತೋರಿಸುವ ಆದರವನ್ನೇ ಪರಮಾತ್ಮನಲ್ಲಿರಿಸಲು, ಅದೇ ಭಕ್ತಿಯೆಂದೆನಿಸಿ, ಮನುಷ್ಯನಿಗೆ ಮೋಕ್ಷವು ಹಸ್ತಗತವಾಗುವದು.

ಪರಮಾತ್ಮನಾದರೂ ಕೇವಲ ಭಕ್ತಿಮುಗ್ಧನು. ಸುಲಭನು. ಹೇಗಂದರೆ:-

"ಮಲಗಿ ಪರಮಾದರದಿ ಪಾಡಲು | ಕುಳಿತು ಕೇಳುವ, ಕುಳಿತು ಪಾಡಲು |
ನಿಲುವ, ನಿಂತರೆ ನಲಿವ, ನಲಿದರೆ ಒಲಿವ ನಿಮಗೆಂಬ ||''

ಇನ್ನು ಭಕ್ತಿಯು ಒಂಬತ್ತು ವಿಧವಾಗಿರುವದೆಂದು ಹೇಳಿರುವರು. ಹೇಗಂದರೆ:-

ಶ್ರವಣಂ ಕೀರ್ತನಂ ಶಂಭೋಃಸ್ಮರಣಂ ಪಾದಸೇವನಂ ||
ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ||೧||

ಅಂದರೆ:-ಪರಮೇಶ್ವರನ ಮಹಿಮೆಯನ್ನೂ, ಚರಿತ್ರೆಯನ್ನೂ, ಗುಣಾನುವಾದವನ್ನೂ ಕಿವಿಯಿಂದ ಕೇಳುವದು; ನಾಲಿಗೆಯಿಂದ ಕೊಂಡಾಡುವದು; ನಾಮಸ್ಮರಣೆಯನ್ನು ಮಾಡುವದು; ಪಾದಸೇವೆಯನ್ನು ಮಾಡುವದು; ಪೂಜೆಮಾಡು

ವದು; ನಮಸ್ಕರಿಸುವದು; ಸೇವೆ ಮಾಡುವದು; ಸಖ್ಯಭಾವದಿಂದಿರುವದು; ಮತ್ತು ಆತ್ಮಜ್ಞಾನವನ್ನು ಪಡೆದು ಸರ್ವಸ್ವವನ್ನೂ ಆತನಿಗೆ ಅರ್ಪಣಮಾಡುವದು. ಇವೇ ನವವಿಧ ಭಕ್ತಿಮಾರ್ಗಗಳು. ಇವು ಸಾತ್ವಿಕ ಮತ್ತು ರಾಜಸ ಸ್ವಭಾವದವರಿಗೆ ಯೋಗ್ಯವಾದವುಗಳು. ಇನ್ನು ತಾಮಸ ಸ್ವಭಾವದವರಿಗೆ ವಿರೋಧ ಭಕ್ತಿಯೂ, ಭೇದಘಾತಾದಿ ಕರ್ಮಗಳಿಂದ ಯುಕ್ತವಾದ ಆಗ್ರಹಭಕ್ತಿಯೂ ಬೇರೆ ಇರುವವು. ಯಾವ ವಿಧವಾದ ಭಕ್ತಿಮಾರ್ಗವನ್ನೇ ಹಿಡಿದರೂ, ಅದೆಲ್ಲಕ್ಕೂ ಮನಸ್ಸಿನ ಏಕಾಗ್ರತೆ ಮಾತ್ರ ಇರಲೇಬೇಕೆನ್ನುವದನ್ನು ಮರೆಯಕೂಡದು. ಮನಸ್ಸಿನ ಏಕಾಗ್ರತೆಯೇ ಭಕ್ತಿಯ ಬೆನ್ನೆಲಬು. ಬೆನ್ನೆಲಬಿಲ್ಲದವನು ಹೇಗೆ ನೆಟ್ಟಗೆ ನಿಲ್ಲಲಾರನೋ, ಹಾಗೆಯೇ ಏಕಾಗ್ರತೆ ಇಲ್ಲದ ಭಕ್ತಿಯು ನಿಷ್ಫಲವು.

ಇನ್ನು ಎಲ್ಲ ವಿಧದ ಭಕ್ತಿಗಳಲ್ಲಿ ಭಗವಂತನು ತಾಮಸ ಭಕ್ತಿಗೆ ಬೇಗನೆ ಒಲಿದಂತೆ, ಇನ್ನಾವ ವಿಧದ ಭಕ್ತಿಗೂ ಅಷ್ಟು ಬೇಗನೆ ಒಲಿದ ಉದಾಹರಣೆಗಳಿರುವದಿಲ್ಲ; ಆದರೆ ತಾಮಸಭಕ್ತಿಮಾರ್ಗದಲ್ಲಿ ಮನಸ್ಸಿನ ದಾರ್ಢ್ಯವು ಸ್ವಲ್ಪ ಕಡಿಮೆಯಾದರೆ ಸಾಕು; ಸರ್ವನಾಶವಾಗುವಂತೆ, ಬೇರೆ ಮಾರ್ಗಗಳಲ್ಲಾಗುವದಿಲ್ಲ. ಅದಕ್ಕಂತೆಯೇ ಜ್ಞಾನಿಗಳು (ಸತ್ವಗುಣಪ್ರಿಯರು) ನವವಿಧಭಕ್ತಿಗಳಲ್ಲಿ ತಾಮಸ ಭಕ್ತಿಯನ್ನು ಸೇರಿಸಿರುವದಿಲ್ಲ. ಸಾತ್ವಿಕವೇ ಆಗಲಿ, ತಾಮಸವೇ ಆಗಲಿ, ಮನುಷ್ಯನು ಕೇವಲ ಭಕ್ತಿಪರವಶನಾಗದ ವಿನಃ ಭಗವಂತನ ಪೂರ್ಣಕೃಪೆಗೆ ಪಾತ್ರನಾಗಲಾರನು.

ಭಾರತ ಯುದ್ಧಾರಂಭಕ್ಕೂ ಮೊದಲು ಪರಮಾತ್ಮನು ಸಂಧಾನಕ್ಕೆಂದು ದುರ್ಯೋಧನನಲ್ಲಿಗೆ ಹೋಗಿದ್ದಾಗ್ಯೆ ಆ ಮಹಾರಾಜನ ಆತಿಥ್ಯವನ್ನು ಕೈಕೊಳ್ಳದೆ ಭಕ್ತನಾದ ಬಡವ ವಿದುರನ ಮನೆಗೆ ಬಂದು ಹೊರಗಿನಿಂದಲೇ "ವಿದುರಾ" ಎಂದು ಕೂಗಲು, ಆ ಕಾಲಕ್ಕೆ ವಿದುರನು ಮನೆಯಲ್ಲಿಲ್ಲದಿರಲು, ನಗ್ನಳಾಗಿ (ಬತ್ತಲೆ) ಮೈತೊಳೆಯುತ್ತಲಿದ್ದ ವಿದುರನ ಹೆಂಡತಿಯು, ಭಗವಂತನ ಧ್ವನಿಯನ್ನು ಕೇಳಿದ ಕೂಡಲೆ ಭಕ್ತಿಪರವಶಳಾಗಿ ಹಾಗೆಯೇ ಹೊರಕ್ಕೆಬಂದು, ಭಗವಂತನನ್ನು ಎದುಗೊಂಡು ಕರೆದೊಯ್ದು ಉಚಿತಾಸನದಲ್ಲಿ ಕುಳ್ಳಿರಿಸಿ ಉಪಚರಿಸತೊಡಗಿದಳು. ಆಗ್ಯೆ ದೇವನು "ನನಗೆ ಬಹಳ ಹಸಿವಾಗಿದೆ. ತಿನ್ನಲಿಕ್ಕೆ ಏನಾದರೂ ಕೊಡು" ಎಂದು ಕೇಳಲು, ಆ ಸಾಧ್ವಿಯು, ಎಲ್ಲ ಕಡೆಗೂ ಹುಡುಕಿ, ಕೊನೆಗೆ ಮೂಲೆಯಲ್ಲಿದ್ದ ಅರ್ಧಮರ್ಧ ಪಕ್ವವಾದ ಬಾಳೆಹಣ್ಣಿನ ಗೊನೆಯನ್ನು ತಕ್ಕೊಂಡು ಬಂದು ಹಣ್ಣುಗಳನ್ನು ಸುಲಿದು ಸುಲಿದು ಭಗವಂತನಿಗೆ ಕೊಡಹತ್ತಿ

ದಳು; ಆದರೆ ಕೊಡತಕ್ಕ ಕಾಲದಲ್ಲಿ ಸಿಪ್ಪೆಗಳನ್ನು ಪರಮಾತ್ಮನಿಗೆ ಕೊಟ್ಟು, ಹಣ್ಣುಗಳನ್ನು ತಾನು ತಿನ್ನುತ್ತಿದ್ದಳು. ಭಕ್ತಿಪರವಶಳಾಗಿ ದೇಹಾಭಿಮಾನ ರಹಿತಳಾದ ಆ ಸಾಧ್ವೀಮಣಿಗೆ ತಾನು ಬತ್ತಲೆ ಇರುವೆನೆಂದಾಗಲಿ, ಸಿಪ್ಪೆಗಳನ್ನು ಭಗವಂತನಿಗೆ ಕೊಡುತ್ತೇನೆಂದಾಗಲಿ ಯಾವ ಪರಿಜ್ಞಾನವೂ ಇರಲಿಲ್ಲ. ಭಗವಂತನಾದರೂ ಭಕ್ತಿರಸಾಮೃತದಲ್ಲಿ ಎದ್ದಿಕೊಡುತ್ತಿದ್ದ ಆ ಸಿಪ್ಪೆಗಳನ್ನು ಹಪಾಪಿ ಹುಟ್ಟಿದವರಂತೆ ಗಪಗಪನೆ ತಿನ್ನುತ್ತಿದ್ದನು. ಅಷ್ಟರಲ್ಲಿ ವಿದುರನು ಮನೆಗೆ ಬಂದು ಇದೆಲ್ಲವನ್ನು ನೋಡಿ ಹೆಂಡತಿಯನ್ನು ಕರೆಯಲು, ಆ ಸಾಧ್ವಿಗೆ ಆಗ್ಗೆ ಎಚ್ಚರ ಹುಟ್ಟಿ, ತಾನು ಬತ್ತಲೆ ಇದ್ದದ್ದಕ್ಕಾಗಿ ನಾಚಿಕೊಂಡು ಒಳಕ್ಕೆ ಹೋದಳು. ವಿದುರನು ತನ್ನ ಹೆಂಡತಿಯ ಕೃತಿಗಾಗಿ ಖೇದಗೊಂಡು, ಭಗವಂತನ ಕ್ಷಮೆ ಬೇಡಿಕೊಳ್ಳಬೇಕೆಂದು ಯೋಚಿಸಿ:-"ದೇವಾ, ನನ್ನ ಮೂರ್ಖಳಾದ ಹೆಂಡತಿಯು ನಿನ್ನನ್ನು ಎಷ್ಟು ಗಾಸಿಗೊಳಿಸಿದಳಲ್ಲೋ! ನಿನ್ನೆದುರಿಗೆ ಆಕೆಯು ಬತ್ತಲೆ ಕೂತದ್ದಕ್ಕೆ ನನಗೇನೂ ಖೇದವಿಲ್ಲ; ಯಾಕಂದರೆ ನೀನು ವಿಶ್ವಜನಕನು. ನಾವೆಲ್ಲರೂ ನಿನ್ನ ಮಕ್ಕಳು. ಅದರಲ್ಲೂ ಅಜ್ಞಾನಿಗಳು. ಅಜ್ಞಾನಿಮಕ್ಕಳು ತಮ್ಮ ತಂದೆತಾಯಿಗಳೆದುರಿನಲ್ಲಿ ಬತ್ತಲೆ ಇರುವದಿಲ್ಲವೆ? ಮೇಲಾಗಿ ನಿನಗೆ ಅಗೋಚರವಾದದ್ದು ಯಾವದೂ ಇಲ್ಲವಷ್ಟೆ? ಅಂದಬಳಿಕ ನಮ್ಮ ಮೈಮೇಲೆ ವಸ್ತ್ರಗಳಿದ್ದರೇನು, ಇಲ್ಲದಿದ್ದರೇನು? ನಿನಗೆ ಅದೆಲ್ಲವೂ ಸಮವೇ; ಆದರೆ ತಾನು ಹಣ್ಣು ತಿಂದು ನಿನಗೆ ಸಿಪ್ಪೆಗಳನ್ನು ಕೊಟ್ಟದ್ದಕ್ಕಾಗಿ ನನಗೆ ಕೆಡಕೆನಿಸುತ್ತದೆ. ದಯಮಾಡಿ ಕ್ಷಮಿಸು" ಎಂದು ನುಡಿದು, ತಾನು ಬೇರೊಂದು ಕಡೆಗೆ ಮುಚ್ಚಿಟ್ಟಿದ್ದ ಉತ್ತಮವಾದ ಪಕ್ವ ಬಾಳೇಹಣ್ಣುಗಳನ್ನೂ, ಜೇನತುಪ್ಪವನ್ನೂ ತಕ್ಕೊಂಡು ಬಂದು, ಹಣ್ಣುಗಳನ್ನು ಸುಲಿದು, ಜೇನುತಪ್ಪದಲ್ಲಿ ಮುಳುಗಿಸಿ. ತಿನ್ನಲಿಕ್ಕೆ ಕೊಡಹತ್ತಿದನು. ಆಗ್ಗೆ ಭಗವಂತನು ವಿದುರನಿಗೆ:-"ಯಾಕೋ ಈ ಹಣ್ಣುಗಳು ಆ ಸಿಪ್ಪೆಗಳಷ್ಟು ರುಚಿ ಹತ್ತಲೊಲ್ಲವು. ಕಾರಣವೇನೋ ತಿಳಿಯದು" ಎಂದು ಅನ್ನಲು, ವಿದುರನಿಗೆ ಆಗ್ಯೆ ಪೂರ್ಣಜ್ಞಾನಪ್ರಕಾಶವಾಗಿ, ಭಕ್ತಿಪರವಶತೆಯ ಮಾಹಾತ್ಮ್ಯವು ತಿಳಿಯಿತು. ಅದಕ್ಕಂತೆಯೇ "ನಿಕಟವಾದ ಪರಮೇಶ್ವರ ಭಕ್ತಿಯೇ ಮುಕ್ತಿಯ ಜೀವಾಳ" ವೆಂದು ಕೀರ್ತನಾರಂಭದಲ್ಲಿ ಹೇಳಿರುವರು.

ಪ್ರಪಂಚದ ಮೋಹವು ಬಲಿಷ್ಠವಾದದ್ದು. ಅದು ಮನಸ್ಸನ್ನು ಆಕರ್ಷಿಸಿಕೊಂಡು ಮರಳುಗೊಳಿಸುವದು. ಭಗವದ್ಗೀತೆಯಲ್ಲಿ ಪರಮಾತ್ಮನು ಅರ್ಜುನನನ್ನು ಕುರಿತು:—

ದೈವೀಹ್ಯೇಷಾಬಲವತೀ ಮಮಮಾಯಾದುರತ್ಯಯಾ |
ಮಾಮೇವಯೇಪ್ರಪದ್ಯಂತೆ ಮಾಯಾಮೇತಾಂತರಂತಿತೇ ||೧||

"ಅರ್ಜುನನೇ. ನನ್ನ ಮಾಯೆಯು ದುರತ್ಯಯುವಾದದ್ದು; ಆದರೆ ಯಾರು ನನ್ನನ್ನೇ ಹೊಂದಿರುವರೋ (ಭಕ್ತಿಯಿಂದ ನನ್ನನ್ನೇ ನಂಬಿರುವರೋ) ಅವರು ಮಾತ್ರ ಮಾಯೆಯನ್ನು ದಾಟುವರು" ಎಂದು ಹೇಳಿರುವನು. ಪರಮಾತ್ಮ ನನ್ನು ಹೊಂದಬೇಕಾದರೆ ಭಕ್ತಿಯು ಅತ್ಯವಶ್ಯಕವು. ಬ್ರಹ್ಮದೇವರು ಮಾಯೆ ಯನ್ನು ಎರಡು ಭಾಗಮಾಡಿ ಸ್ತ್ರೀಯರಲ್ಲಿ ಒಂದು ಭಾಗವನ್ನೂ ಕನಕದಲ್ಲೊಂದು ಭಾಗವನ್ನೂ ಇಟ್ಟಿರುವನು.

ವೇಧಾದ್ವೇಧಾಭ್ರಮಂ ಚಕ್ರೇ ಕಾಂತಾಸು ಕನಕೇಷು ಚ |
ತಾಸು ತೇಷ್ವಪ್ಯನಾಸಕ್ತಃ ಸಾಕ್ಷಾದ್ಭರ್ಗೋ ನರಂಕೃತಿಃ ||

ಅಂದಮೇಲೆ ಇವೆರಡಕ್ಕೂ ಅಂದರೆ ಕನಕ-ಕಾಮಿನಿಗಳಿಗೆ ಮನಸೋಲದವನು ನರರೂಪವನ್ನು ಧರಿಸಿದ ಕೇವಲ ಪರಮೇಶ್ವರನೆಂದೇ ತಿಳಿಯಬೇಕು. ಇನ್ನು

ಸ್ತ್ರೀರೂಪಂ ಮೋಹಕಂ ಪುಂಸೋ ಯೂ ನ ಏವ ಭವೇತ್ಕ್ಷಣಂ ||
ಕನಕಂ ಸ್ತ್ರೀ-ಬಾಲ-ವೃದ್ಧ ಷಂಢಾನಾಂ ಮ ವಿಸರ್ವದಾ ||೧||

ಇವೆರಡರಲ್ಲಿ ಸ್ತ್ರೀರೂಪವು ಪ್ರಾಯದ ಪುರುಷರಿಗೇ ಅದೂ ಸ್ವಲ್ಪ ಹೊತ್ತು, ಅಂದರೆ ಅವರ ಕಾಮಶಾಂತಿಯಾಗುವ ವರೆಗೆ ಮೋಹಕವಾಗಿರುವದು. ಕಾಮ ಶಾಂತಿಯಾದ ಕೂಡಲೆ ತಾತ್ಪೂರ್ತಿಕವಾದರೂ ವಿರತಿಯು ಉತ್ಪನ್ನವಾಗಲೇ ಬೇಕು; ಯಾಕಂದರೆ ಸ್ತ್ರೀಸುಖವು ಇಂದ್ರಿಯ ಜನ್ಯವಾದ ವಿಷಯ ಸುಖವು. ಈ ಬಗ್ಗೆ ಶ್ರೀ ಶಂಕರಾಚಾರ್ಯರವರು:—

ನಾರೀಸ್ತನ ಭರನಾಭಿನಿವೇಶಂ ಮಿಥ್ಯಾಮಾಯಾ ಮೋಹಾವೇಶಂ ||
ಏತನ್ಮಾಂಸ ವಸಾದಿ ವಿಕಾರಂ ಮನಸಿವಿಚಾರಯ ವಾರಂ ವಾರಂ ||೧||

ಸ್ತ್ರೀಮೋಹವು ಮಾಂಸವಸಾದಿಗಳ ವಿಕಾರವಿರುವದರಿಂದ, ವಾರ್ಧಕ್ಯದಲ್ಲಿಯೂ, ಬಾಲ್ಯದಲ್ಲಿಯೂ ಅದು ಮನುಷ್ಯನನ್ನು ಅಷ್ಟೊಂದು ಬಾಧಿಸಲಾರದು; ಆದರೆ ಕನಕತೃಷ್ಣೆಯು ಅಂದರೆ ದುಡ್ಡಿನ ಮೇಲಿನ ಆಶೆಯು, ಸ್ತ್ರೀಯರನ್ನೂ, ಬಾಲಕ ರನ್ನೂ, ವೃದ್ಧರನ್ನೂ, ಷಂಢರನ್ನೂ ಸಹ ಸಮನಾಗಿಯೇ ಯಾವಾಗಲೂ ಬಾಧಿ ಸುವದು. ಇದರ ಮೇಲಿಂದ ನೋಡಲು, ಸ್ತ್ರೀ ವ್ಯಾಮೋಹಕ್ಕಿಂತಲೂ ಕನಕ ಮೋಹವು ಹೆಚ್ಚು ಬಲಿಷ್ಠವೆಂದು ಹೇಳಬೇಕಾಗುವದು; ಯಾಕಂದರೆ ಮನು ಷ್ಯನ ದ್ರವ್ಯಾಪೇಕ್ಷೆಗೆ ಪಾರಾವಾರವೇ ಇರುವದಿಲ್ಲ:—

ನಿಸ್ಸೋ ವಷ್ಟಿ ಶತಂ ಶತೀದಶಶತಂ ಲಕ್ಷಂ ಸಹಸ್ರಾಧಿಪಃ |
ಲಕ್ಷೇಶಃ ಕ್ಷಿತಿರಾಜತಾಂ ಕ್ಷಿತಿಪತಿಶ್ಚಕ್ರೇಶತಾಂ ವಾಂಛತಿ ||
ಚಕ್ರೇಶಃ ಸುರರಾಜತಾಂ ಸುರಪತಿರ್ಬ್ರಹ್ಮಾಸ್ಪದಂ ವಾಂಛತಿ |
ಬ್ರಹ್ಮಾವಿಷ್ಣುಪದಂ ಹರಿಃ ಶಿವಪದಂ ತೃಷ್ಣಾವಧಿಂ ಕೋ ಗತಃ ||೧||

ನಿರ್ಧನನಿಗೆ ನೂರು ನಾಣ್ಯಗಳು ಸಿಕ್ಕರೆ ಸಾಕೆಂದೆನಿಸುವದು; ಅದೇ ನೂರು ದೊರೆತ ಕೂಡಲೆ ಸಾವಿರ ಬೇಕೆಂದೆನಿಸುವದು; ಸಾವಿರ ಸಿಕ್ಕರೆ ಲಕ್ಷವು ಬೇಕಾಗುವದು; ಲಕ್ಷಾಧೀಶನಿಗೆ ರಾಜ್ಯಪದವೂ, ರಾಜನಿಗೆ ಚಕ್ರವರ್ತಿಪದವೂ ಬೇಕಾಗುವದು; ಚಕ್ರವರ್ತಿಗೆ ಇಂದ್ರಪದವಿಯೂ, ಇಂದ್ರನಿಗೆ ಬ್ರಹ್ಮಪದವೂ, ಬ್ರಹ್ಮನಿಗೆ ಹರಿ, ಹರ ಪದಗಳು ದೊರೆತರೂ ಅದಕ್ಕೂ ಹೆಚ್ಚಿನ ಪದವಿಗಳು ಬೇಕಾಗುವವು. ಬೆಂಕಿಗೆ ಉರವಲವು ದೊರೆತಂತೆ ಹೇಗೆ ಅದು ವೃದ್ಧಿಹೊಂದುವದೋ, ಹಾಗೆಯೇ ಮನುಷ್ಯನ ಆಶೆಯು ಇಷ್ಟಾರ್ಥಪೂರ್ತಿಯಾದ ಹಾಗೆಲ್ಲ ಹೆಚ್ಚುತ್ತಲೇ ಹೋಗುವದಲ್ಲದೆ ಮನಸ್ಸಿಗೆ ತೃಪ್ತಿ ಇರುವದಿಲ್ಲ. ಮನಸ್ಸು ತೃಪ್ತವಾಗುವವರೆಗೆ ಸುಖವಿಲ್ಲ ಅಂದ ಮೇಲೆ ಮನಸ್ಸು ಆಶಾರಹಿತವಾಗಿ ಪರಮೇಶ್ವರನಲ್ಲಿ ನೆಲೆಗೊಳ್ಳಬೇಕೆಂದೇ ಕೀರ್ತನಾರಂಭದಲ್ಲಿ ["ಸ್ಥಿರವಲ್ಲದ (೩ನೇ ಪುಟ) ಪೀಠಿಕಾ ಪದದ ಕಡೇ ನುಡಿಯನ್ನು ಹೇಳಬೇಕು".] ಎಂದು ಹೇಳಿರುವರು.

ಇನ್ನು ಪ್ರಪಂಚದ ಮೋಹವನ್ನೇ ತೊರೆಯಬೇಕೆಂದು ಹೇಳಿದ ಮೇಲೆ, "ಮನುಷ್ಯನು ಲಗ್ನವನ್ನು ಮಾಡಿಕೊಳ್ಳಲೇ ಬಾರದೇನು?" ಎಂಬ ಪ್ರಶ್ನೆಯು ಸಹಜವಾಗಿ ಉಪಸ್ಥಿತವಾಗುವದು; ಆದರೆ ಭಗವತ್ಸಂಕೇತವು ಹಾಗಿದ್ದಂತೆ ತೋರುವದಿಲ್ಲ ಯಾಕಂದರೆ ಈಶ್ವರೀಸಂಕೇತವೇ ಹಾಗಿದ್ದರೆ ಪ್ರಾಣಿಗಳಲ್ಲಿ ಗಂಡು, ಹೆಣ್ಣುಗಳೆಂಬ ಭೇದಗಳೇ ಬೇಡಾಗಿದ್ದವು. ಪ್ರಾಣಿಗಳಿಗೆ ಜನನೇಂದ್ರಿಯಗಳನ್ನೂ ತತ್ಸಂಬಂಧವಾದ ಚೇತನಾಶಕ್ತಿಯನ್ನೂ ಕೊಡುತ್ತಲೇ ಇರಲಿಲ್ಲ. ಅಂದರೆ ಪ್ರಪಂಚದಲ್ಲಿದ್ದರೂ, ಮಕ್ಕಳನ್ನು ಪಡೆದರೂ ಬ್ರಹ್ಮಚರ್ಯವನ್ನು ಕಾಯ್ದುಕೊಳ್ಳಬೇಕೆಂಬದೇ ಜ್ಞಾನಿಗಳ ಬೋಧದ ಸಾರವು. ಮಕ್ಕಳನ್ನು ಪಡೆದೂ ಬ್ರಹ್ಮಚರ್ಯವನ್ನು ಕಾಯ್ದುಕೊಳ್ಳುವದೆಂದರೆ ಸೋಜಿಗವೆನಿಸಬಹುದು. ಈ ವಿಷಯದಲ್ಲಿ ಚಮತ್ಕಾರವಾದ ಒಂದು ದೃಷ್ಟಾಂತವಿರುವದು.

ಒಮ್ಮೆ ವಿಶ್ವಾಮಿತ್ರ ಮುನಿಗಳು ವಸಿಷ್ಠರ ದರ್ಶನಕ್ಕಾಗಿ ಅವರ ಆಶ್ರಮಕ್ಕೆ ಬಂದರು. ಪರಸ್ಪರ ಕುಶಲ ಪ್ರಶ್ನೆಗಳಾದನಂತರ, ಇಬ್ಬರು ತಪಸ್ವಿಗಳು ಬಹಳ ಕಾಲ ಕೂಡಿ ಇದ್ದರೆ ಪರಸ್ಪರ ಮಾತುಕಥೆಗಳಲ್ಲಿ ವೇಳೆಹೋಗಿ, ತಪಸ್ಸಿಗೆ

ಹಾನಿಯೊದಗುವದರಿಂದ ಆ ಕೂಡಲೆ ವಿಶ್ವಾಮಿತ್ರರು ಹೊರಟು, ನದಿಯನ್ನು ದಾಟಿ ಆಚೆಯ ದಡಕ್ಕೆ ಹೋಗಿ ನಿಂತರು. ಆ ದಿನ ಏಕಾದಶಿ ಇದ್ದ ಪ್ರಯುಕ್ತ ಅತಿಥಿಯ ಭೋಜನ ಸತ್ಕಾರಕ್ಕೆ ಅವಕಾಶವಿಲ್ಲದಿರಲು, ಮಾರನೆ ದಿನ ಸಾಧನಿ ದ್ವಾದಶಿ ಇದ್ದದರಿಂದಲೂ ಪ್ರಾತಃಕಾಲ ಭೋಜನ ತೀರಿಸಿಕೊಂಡು ಹೋಗ ಬೇಕೆಂದು ವಸಿಷ್ಠರು ಬೇಡಲು. ವಿಶ್ವಾಮಿತ್ರರೂ ಒಪ್ಪಿಕೊಂಡರು. ಬೆಳಗಾಗು ವದರೊಳಗೆ ಅರುಂಧತೀದೇವಿಯು ಪತಿಯಾದ ವಸಿಷ್ಠರ ಆಜ್ಞೆಯ ಪ್ರಕಾರ ಅಡಿಗೆಯೆಲ್ಲವನ್ನೂ ಮಾಡಿ ವಿಶ್ವಾಮಿತ್ರರಿದ್ದಲ್ಲಿಗೆ ತಕ್ಕೊಂಡು ಹೋಗಲು, ನದಿ ಯನ್ನು ಹೇಗೆ ದಾಟಬೇಕೆಂದು ವಸಿಷ್ಠರನ್ನು ಕೇಳಲು, ಆ ಮಹನೀಯರು:- "ವಸಿಷ್ಠನು ಸದಾ ಬ್ರಹ್ಮಚಾರಿಯಾಗಿದ್ದರೆ ದಾರಿಯನ್ನು ಕೊಡು" ಎಂದು ನದಿ ಯನ್ನು ಕೇಳು. ಅದು ದಾರಿಯನ್ನು ಕೊಟ್ಟರೆ ಹೋಗು; ಎಂದು ಹೇಳಲು, ನೂರು ಮಕ್ಕಳನ್ನು ವಸಿಷ್ಠರಿಂದಲೇ ಪಡೆದಿದ್ದ ಆ ಪತಿವ್ರತಾಶಿರೋಮಣಿಗೆ ಆಶ್ಚರ್ಯವೆನಿಸಿದರೂ ಪಿಟ್ಟೆಂದು ಮಾತಾಡದೆ, ಊಟದ ಸಾಹಿತ್ಯಗಳನ್ನು ತಕ್ಕೊಂಡು ನದಿಯ ಬಳಿಗೆ ಬಂದು, ಋಷಿಗಳು ಆಜ್ಞೆಮಾಡಿದ ಪ್ರಕಾರ ಹೇಳಲು, ನದಿಯು ದಾರಿಯನ್ನು ಕೊಟ್ಟಿತು. ಅರುಂಧತೀದೇವಿಯು ವಿಶ್ವಾಮಿತ್ರರ ಊಟವಾದನಂತರ ಸಾಮಾನುಗಳನ್ನು ತಕ್ಕೊಂಡು ನದಿಯನ್ನು ಹೇಗೆ ದಾಟ ಬೇಕೆಂದು ಯೋಚಿಸುತ್ತ ನಿಂತಿರಲು, ಜ್ಞಾನಿಗಳಾದ ವಿಶ್ವಾಮಿತ್ರರು:-"ತಾಯಿ, ವಿಶ್ವಾಮಿತ್ರನು ನಿತ್ಯ ನಿರಾಹಾರಿಯಾಗಿದ್ದರೆ, ದಾರಿಯನ್ನು ಕೊಡು, ಎಂದು ನದಿ ಯನ್ನು ಕೇಳಿ ಹೋಗಿರಿ" ಎಂದು ನುಡಿಯಲು, ತನ್ನೆದುರಿಗೇ ತಂದ ಸಾಮಾನು ಗಳನ್ನೆಲ್ಲ ತಿಂದ ಋಷೀಶ್ವರನು ನಿರಾಹಾರಿಯು ಹೇಗೆ? ಎಂದು ಯೋಚಿಸುತ್ತಿ ರಲು, ವಿಶ್ವಾಮಿತ್ರರು:-"ತಾಯಿ, ಇದಕ್ಕೇಕೆ ಇಷ್ಟು ಯೋಚನೆ? ಶತಪುತ್ರ ರನ್ನು ಹೆತ್ತ ಮಹನೀಯಳು ನೀನು ಎದುರಿಗೇ ಇರುತ್ತಿರಲಿಕ್ಕೆ ನಿಮ್ಮ ಯಜ ಮಾನರು ಬ್ರಹ್ಮಚಾರಿಗಳಾದ ಮೇಲೆ ಸ್ವಲ್ಪ ಅನ್ನವನ್ನೂಟಮಾಡಿದ ನಾನು ನಿರಾಹಾರಿಯಾಗಲಾರೆನೇ? ಬೇಕಾದರೆ ಇದರ ಇಂಗಿತವನ್ನು ವಸಿಷ್ಠರನ್ನು ಕೇಳಿರಿ. ಮಹನೀಯರಾದ ಋಷಿವರ್ಯರು ತಿಳಿಸಿ ಹೇಳುವರು." ಎಂದು ನುಡಿಯಲು, ಅರುಂಧತೀದೇವಿಯು ಹಾಗೆಯೇ ಹೊರಟು. ವಿಶ್ವಾಮಿತ್ರರು ಹೇಳಿದಂತೆ ಹೇಳಿ ನದಿಯನ್ನು ದಾಟಿ ಆಶ್ರಮಕ್ಕೆ ಬಂದು, ವಸಿಷ್ಠರಿಗೆ ಕೈ- ಮುಗಿದು ನಡೆದ ಚಮತ್ಕಾರದ ಮರ್ಮವನ್ನು ತಿಳಿಸಿ ಹೇಳಬೇಕೆಂದು ಕೇಳಲು, ವಸಿಷ್ಠರು:-ಸದಾ ಬ್ರಹ್ಮಚಿಂತನದಲ್ಲಿಯೇ ರತನಾಗಿ ಪರಬ್ರಹ್ಮಪದದಲ್ಲಿ ಮನ

ಬಿಟ್ಟ ಮನುಷ್ಯನಿಗೆ ಅವನ ಕರ್ಮದೇಹದಿಂದುಂಟಾಗುವ ಕರ್ಮಗಳ ಲೇಪವಾಗುವದಿಲ್ಲ. ಆ ಕರ್ಮಗಳಿಂದ ನಾವು ಹೇಗೆ ಅಲಿಪ್ತರಾಗಿರುವೆವೋ ಹಾಗೆಯೇ ಮನುಷ್ಯನ ಮನಸ್ಸು ಸದಾ ಪರಬ್ರಹ್ಮಚಿಂತನೆಯಲ್ಲಿದ್ದರೆ, ಅವನ ಜಡದೇಹದಿಂದ ಲಾಗುವ ಕರ್ಮಗಳ ಲೇಪವು ಅವನಿಗೆ ಆಗುವದಿಲ್ಲ. ವಿಶ್ವಾಮಿತ್ರ ಋಷಿಗಳು ಸದಾ ಪರಬ್ರಹ್ಮಚಿಂತನೆಯಲ್ಲಿರುವವರಾದ ಕಾರಣ ಮಿತಿಮೀರಿ ಊಟಮಾಡಿದರೂ ಅವರು ನಿರಾಹಾರಿಗಳೇ; ಯಾಕಂದರೆ ಅವರ ಮನಸ್ಸು ಊಟದ ಸುಖದಲ್ಲಿ ಆಸಕ್ತವಾಗಿರುವದಿಲ್ಲ. ಬ್ರಹ್ಮಜ್ಞಾನಿಯು ಸಂಸಾರವಾದರೂ ಅದೇ ತರದ್ದಾಗಿರುವದು; ಯಾಕಂದರೆ ಸಂಸಾರದಲ್ಲಿ ಅವನು ನಿರಾಸಕ್ತನು; ಕಾರಣ ನಿರ್ಲಿಪ್ತನು.

ಇದರ ಮೇಲಿಂದ ಕಂಡು ಬರುವದೇನಂದರೆ:-ಮನುಷ್ಯನ ಮನಸ್ಸು ವಿಷಯಾಸಕ್ತವಾಗದೆ, ಯಾವಾಗಲೂ ಭಗವಂತನ ಚರಣಚಿಂತನೆಯಲ್ಲಿ ಮಗ್ನವಾದರೆ, ಅವನಿಗೆ ಯಾವ ಕರ್ಮಲೇಪವೂ ಇಲ್ಲದೆ, ಮೋಕ್ಷವು ಸುಲಭವಾಗಿಯೇ ಹಸ್ತಗತವಾಗುವ ಕಾರಣ, ಕೀರ್ತನಾರಂಭದಲ್ಲಿ ಜ್ಞಾನಿಗಳು ಮನಸ್ಸಿಗೆ "ಹರ ಚರಣದಿ ಸ್ಥಿರವಾಗಿ ನಿಲ್ಲೆನೀ | ವರ ಮುಕುತಿಯು ಕರತಲಾಮಲಕ"ವೆಂದು ಉಪದೇಶಿಸಿರುವರು.

ಇನ್ನು ಪರಮಾತ್ಮನ ಅನಂತ ರೂಪಗಳಲ್ಲಿ, ಭವಾನೀಪತಿಯಾದ ಪರಮೇಶ್ವರನಲ್ಲೇ ಭಕ್ತಿಯನ್ನಿಡಬೇಕೆಂದು ಕೀರ್ತನಾರಂಭದಲ್ಲಿ ಮನಸ್ಸಿಗೆ ಉಪದೇಶ ಮಾಡಿದ ಕಾರಣವೇನಂದರೆ:-ಪರಮ ಸಾಧುವಾದ ಕಬೀರನು "ದೇವತೆಗಳಲ್ಲಿ ಶಿವನಿಗೆ ಸಮಾನರಾದ ದಾನಶೂರರೂ, ನಾಮಗಳಲ್ಲಿ ರಾಮನಾಮಕ್ಕೆ ಸಮಾನವಾದ ನಾಮವೂ ಇಲ್ಲ"ವೆಂದು ಹೇಳಿರುವನು. 'ಇನ್ನು ತನಗೇ ಏನೂ ಇಲ್ಲದ ದಿಗಂಬರನು ಎರಡನೇಯವರಿಗೆ ಕೊಡುವ ಬಗೆ ಹೇಗೆ?' ಎಂಬ ಕಲ್ಪನೆಯು ಎಷ್ಟೋ ಜನರಿಗೆ ಬರಬಹುದು; ಆದರೆ ಇದ್ದವರು ಕೊಡುವದಕ್ಕಿಂತಲೂ ಏನೂ ಇಲ್ಲದವರು ಕೊಡುವದು ಆಶ್ಚರ್ಯಕರವಲ್ಲವೆ? ಶಿವನ ಲೀಲೆಯೇ ಹೀಗೆ ಚಮತ್ಕಾರವಾದದ್ದು.

"ಚಿತಾಭಸ್ಮಾ ಲೇಪೋ ಗರಳಮಶನಂ ದಿಕ್ಪಟಧರಃ" ಎಂದು ಆ ಪರಶಿವನನ್ನು ವರ್ಣಿಸಿರುವರು. ಅಂದರೆ ಶಿವನು ಹೆಣದ ಬೂದಿಯನ್ನು ಮೈಗೆ ಲೇಪಿಸಿಕೊಳ್ಳುವವನೂ, ವಿಷವನ್ನುಂಡವನೂ, ದಿಗಂಬರನೂ (ವಸ್ತ್ರರಹಿತನೂ) ಆಗಿರುವನು. ಭಕ್ತರಿಗೆ ಬೇಕುಬೇಕಾದಂಥ ಇಷ್ಟಾರ್ಥಗಳನ್ನು ಪೂರೈಸಿ ಕೊಡುವ




ಪ್ರಭುವಿಗೆ ಊಟಮಾಡಲಿಕ್ಕೆ ಅನ್ನಕ್ಕೆ ಕೊರತೆ ಇರುವದೇ? ಪ್ರತ್ಯಕ್ಷ ಅನ್ನ ಪೂರ್ಣೆಯೇ ಅರ್ಧಾಂಗಿಯು. ಇಂಥವನಿಗೆ ಲೇಪಿಸಿಕೊಳ್ಳುವದಕ್ಕೆ ಪರಿಮಳ ಗಳಿಲ್ಲವೆ? ಅವನೇ ಸುಗಂಧಿಯಲ್ಲವೆ? ಉಟ್ಟುಕೊಳ್ಳುವದಕ್ಕೆ ವಸ್ತ್ರಗಳಿಲ್ಲವೆ? ಇರದೇ ಏನು? ಆತನನ್ನು ನಂಬಿದವರಿಗೇ ಯಾವ ಕೊರತೆಯೂ ಆಗದಿ ರಲು, ಆತನಿಗೆಲ್ಲಿಯ ಕೊರತೆ? ಆದರೆ ಸುಗಂಧವಸ್ತುಗಳ ಲೇಪನವು ಮನಸ್ಸನ್ನು ವಿಷಯಾಸಕ್ತವಾಗಿ ಮಾಡುವ ಕಾರಣದಿಂದಲೂ, ಸರ್ವ ಪ್ರಾಣಿಗಳೂ ತಮ್ಮ ದೇಹವನ್ನು ಎಷ್ಟೇ ತರದಿಂದ ಲಾಲನ-ಪಾಲನ ಮಾಡಿದರೂ ಕಡೆಗೆ ಭಸ್ಮರೂಪ ವನ್ನೇ ಹೊಂದುವರೆಂಬದನ್ನು ತೋರಿಸಿ, ಮನುಷ್ಯನಲ್ಲಿ ವಿರಕ್ತಿಯನ್ನುತ್ಪನ್ನ ಮಾಡುವದಕ್ಕಾಗಿಯೇ ಸುಗಂಧದ್ರವ್ಯಗಳನ್ನು ತೊರೆದು, ಚಿತಾಭಸ್ಮ ಲೇಪನ ಮಾಡಿಕೊಂಡಿರುವನೇ ಹೊರ್ತು ಸುಗಂಧದ್ರವ್ಯಗಳ ಕೊರತೆಯಿಂದಲ್ಲ. ತಾನು ಮನ್ಮಥನನ್ನು ಸುಟ್ಟಂತೆ ಜನರೂ ವಿರಕ್ತಿಯಿಂದ ಷಡ್ರಿಪುಗಳನ್ನು ಸುಟ್ಟು ಷಡ್ರಿಪು ಚಿತಾಭಸ್ಮವನ್ನು ಲೇಪಿಸಿಕೊಳ್ಳಬೇಕೆಂಬದೇ ಆ ಜಗದಾದಿ ಗುರುವಿನ ಉದ್ದೇಶವು ಮತ್ತು ಉದಾಹರಣೆಯು.



ಇನ್ನು ವಿಷಪಾನ ಮಾಡಿದ್ದಾದರೂ ಹೊಟ್ಟೆಗಿಲ್ಲದ್ದಕ್ಕಲ್ಲ; ಇಲ್ಲವೆ ಜೀವದ ಬೇಸರದಿಂದಲ್ಲ. ಅದಾದರೂ ಜನರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಡಲಿಕ್ಕೇ.

ದೃಷ್ಟ್ವಾ ಕೌಸ್ತುಭ ಮಪ್ಸರೋಗಣಮಪಿ ಪ್ರಕ್ರಾಂತ ವಾದಾಮಿಥಃ ।
ಗೀರ್ವಾಣಾಃ ಕತಿವಾನಸಂತಿ ಭುವನೇಭಾರಾದಿವಃಕೇವಲಂ ॥
ನಿಷ್ಕ್ರಾಂತೇಗರಳೇದೃತೇ! ಸುರಗಣೇ ನಿಶ್ಚೇಷ್ಟಿತೇ ವಿಷ್ಟರೇ ।
ಮಾ ಭೈಷ್ಟೇತಿಗಿರಾ ನಿಹಾಸಧುರಿಯೋ ದೇವಸ್ತಮೇವಸ್ತುಮಃ ॥

ಸಮುದ್ರ ಮಂಥನಕಾಲದಲ್ಲಿ ಲಕ್ಷ್ಮೀದೇವಿಯೂ, ಕೌಸ್ತುಭರತ್ನವೂ, ಅಪ್ಸರ ಸ್ತ್ರೀಯರೂ, ಅಮೃತವೇ ಮೊದಲಾದವುಗಳು ಉತ್ಪನ್ನವಾಗಲು, ನಮಗೆ ನಮ ಗೆಂದು ಕಚ್ಚಾಡಿ ಹಂಚಿಕೊಂಡಂಥ ಸ್ವಾರ್ಥಿಗಳೂ, ಆಶಾಧೀನರೂ ಆದ ದೇವತೆ ಗಳು ಸ್ವರ್ಗಕ್ಕೆ ಭಾರವಾಗಿ ಎಷ್ಟು ಜನರಿಲ್ಲ! ಇವರು ತಾವೇ ಆಶಾಯುತರಾಗಿರು ವಾಗ ಎರಡನೇದವರಿಗೆ ಕೊಡುವ ಬಗೆ ಹೇಗೆ? ಅದೇ ಕಾಲಕೂಟವಿಷವು ಹುಟ್ಟಿ ಜಗತ್ತನ್ನೇ ಸುಡಹತ್ತಲು, ದೇವತೆಗಳು ಪಲ್ಗಿರಿದು ನಿಶ್ಚೇಷ್ಟಿತರಾಗಿ ಬೀಳಲು, ತನ್ನ ಸ್ವಾರ್ಥವೇನೂ ಇಲ್ಲದಿದ್ದರೂ ಕೇವಲ ಜಗತ್ತಿನ ಕಲ್ಯಾಣಕ್ಕಾಗಿಯೇ ಆ ಭಯಂಕರ ವಿಷವನ್ನು ಅನುಮಾನವಿಲ್ಲದೆ ಪಾನ ಮಾಡಿದ ವಿಭುವೇ ಜಗತ್ಪ್ರಭುವು. ಜನರಾದರೂ "ತಮ್ಮ ಸ್ವಾರ್ಥವನ್ನು ತ್ಯಜಿಸಿ, ಪ್ರಾಣದ ಹಂಗು ಇಡದೆ ಪರೋಪ

ಕಾರ ನಿರತರಾಗಬೇಕೆ''ಂಬದನ್ನು ಸೂಚಿಸುವದಕ್ಕಾಗಿಯೇ ಆ ಪರಮ ವೈರಾಗ್ಯ ಮೂರ್ತಿಯು ವಿಷಪಾನ ಮಾಡಿದನೇ ಹೊರ್ತು ಹೊಟ್ಟೆಗಿಲ್ಲದ್ದಕ್ಕಲ್ಲ.

ಇನ್ನು ದಿಗಂಬರನಾಗಿರುವದಾದರೂ ಬಟ್ಟೆಗಳಿಲ್ಲವೆಂದಲ್ಲ. ಜನರು ತನ್ನಲ್ಲಿ ಭಕ್ತಿಯನ್ನಿಟ್ಟು, ಭಕ್ತಿಪರವಶರಾಗಿ, ವಿದುರನ ಹೆಂಡತಿಯಂತೆ ದೇಹಾಭಿಮಾನ ರಹಿತರಾಗಿ, ಪ್ರಪಂಚದ ಮಾಯೆಯೆಂಬ ವಸ್ತ್ರ (ಅಂಬರ) ರಹಿತರಾಗಬೇಕೆಂಬದೇ ಆ ಮಹೇಶ್ವರನ ಉದ್ದೇಶವು. ಪ್ರಪಂಚ ಮಾಯಾರಹಿತನಾದ ಬ್ರಹ್ಮಜ್ಞಾನಿಗೆ ದಿಗಂಬರನಾಗಿದ್ದರೂ ವಸ್ತ್ರ ವಿಭೂಷಿತನಾಗಿದ್ದರೂ ಎರಡೂ ಸಮವೇ. ಪರ ಮೇಶ್ವರನ ಚರಿತವೆಲ್ಲವೂ ಇದರಂತೆಯೇ ಇರುವದು. ಆ ಮಹಾದೇವನು ಕೇವಲ ವೈರಾಗ್ಯಮೂರ್ತಿಯಾಗಿರುವದರಿಂದ ಯಾವ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ ತನ್ನ ಭಕ್ತರ ಇಷ್ಟಾರ್ಥಗಳನ್ನು ಪೂರೈಸುವನು. ತನ್ನ ಪ್ರಾಣಲಿಂಗವನ್ನೇ ಭಕ್ತ ರಾವಣನಿಗೆ ಕೊಟ್ಟ ಧೀರೋದಾರ ಪ್ರಭುವು, ಇಂಥವನು ತನ್ನನ್ನು ನಂಬಿದವರಿಗೆ ಏನು ಕೊಡಲಿಕ್ಕಿಲ್ಲ! ಬೇಕಾದದ್ದನ್ನು ಬೇಕಾದಷ್ಟು ಕೊಡತಕ್ಕವನು. ಅದಕ್ಕಾ ಗಿಯೇ ಜ್ಞಾನಿಗಳು ಕೀರ್ತನಾರಂಭದಲ್ಲಿ ಆ ಜಗದೇಕದಾತೃವೂ, ಜಗದಾದಿ ಗುರು ವೂ ಆದ ಆ ಪರಬ್ರಹ್ಮ, ದೇವ ದೇವೇಶನಾದ ಶಂಭುವನ್ನೇ ಆಶ್ರಯಿಸಬೇಕೆಂದು ಮನಸ್ಸಿಗೆ ಉಪದೇಶಿಸಿರುವರು.

ಈ ರೀತಿಯಲ್ಲಿ ಶಂಕರನಲ್ಲಿ ಭಕ್ತಿಯನ್ನಿಟ್ಟು ಸದಾ ಪಾಪಕರ್ಮ ನಿರತರಾದ ಮಣಿಮಲ್ಲಾಸುರರೆಂಬ ದೈತ್ಯರು ತಮ್ಮ ತಾಮಸ ಸ್ವಭಾವಕ್ಕನುಸರಿಸಿ ವಿರೋಧ ಭಕ್ತಿಯಿಂದ ಹೇಗೆ ಉದ್ಧಾರರಾದರೆಂಬ ವಿಷಯದಲ್ಲಿ **ಶ್ರೀಮನ್ಮಲ್ಲಾರಿಯ ಮಾಹಾತ್ಮ್ಯ** ಕಥೆಯನ್ನು ನಿರೂಪಣ ಮಾಡುವೆನು.

ಜಯ ಪುಂಡರೀಕ ವರದ ಹರಿ ವಿಠ್ಠಲ! ಸೀತಾಕಾಂತ ಸ್ಮರಣ
ಜಯ ಜಯರಾಮ!! ನಮಃ ಪಾರ್ವತೀಪತಯೇ ಹರ
ಹರ ಮಹಾದೇವ ಶ್ರೀಗುರುದೇವ! ದತ್ತ!!!

ಇತಿ ನಮನಂ.



# ಆಖ್ಯಾನ.



ಪೂರ್ವದಲ್ಲಿ ಅಂದರೆ ಕೃತಯುಗದಲ್ಲಿ ತನ್ನ ನಿಸ್ಸೀಮ ಭಕ್ತಿಪ್ರಭಾವದಿಂದ ಭಗವಂತನನ್ನು ನರಹರಿರೂಪದಿಂದ ಅವತಾರ ಮಾಡಿಸಿದ ಭಗವದ್ಭಕ್ತ ಚೂಡಾಮಣಿಯಾದ ಪ್ರಹ್ಲಾದನ ವಂಶದಲ್ಲಿ ಮಣಿ-ಮಲ್ಲಾಸುರರೆಂಬರಿಬ್ಬರು ಜನಿಸಿದರು. ಇವರಲ್ಲಿ ಮಲ್ಲಾಸುರನು ಹಿರಿಯನು. ತಾಮಸ ಸ್ವಭಾವದ ಮಲ್ಲನು ದೇವ ಬ್ರಾಹ್ಮಣ ವಿರೋಧಿಯಾಗಿದ್ದು, ತಾನು ಅಜಿಂಕ್ಯನಾಗಿ, ಮರಣಭಯವಿಲ್ಲದೆ, ಎಲ್ಲರಿಗೂ ಉಪದ್ರವವನ್ನು ಕೊಡುವ ಉದ್ದೇಶದಿಂದ, ಬ್ರಹ್ಮನನ್ನು ಕುರಿತು ಘೋರತರವಾದ ತಪಸ್ಸನ್ನು ಮಾಡಿದನು. ಹೇಗಂದರೆ:—

||ಭಾ. ಷ ||ಮರಣದುರುತರಭಯವನೀಗಲು|ಚರಣಕೊನೆಯನುಧರಣಿಗೊತ್ತುತ|
ಧರಸಿ ದೇಹದ ಭಾರವೆಲ್ಲವ ಶಿರವಮೇಲೆತ್ತಿ ||
ಇರಿಸಿದೃಷ್ಟಿಯ ಚಲಿಸಿದಲೆ ಸಾ | ಸಿರಕಿರಣನೊಳ್ ದೇಹಪರವೆಯ |
ಖಿರದ ಲೊಲಿಸಿದ ಸುರಹರಿಯುನನ್ನುರುತರದ ತಪದಿ || ೧ ||

ಕಾಲಿನ ಹೆಬ್ಬೆರಳನ್ನು ನೆಲಕ್ಕೂರಿ, ಮೋರೆಯನ್ನು ಮೇಲಕ್ಕೆತ್ತಿ, ಸೂರ್ಯನಲ್ಲಿ ಚಲಿಸದಂತೆ ದೃಷ್ಟಿಯನ್ನಿಟ್ಟು ಧೂಮ್ರಪಾನವನ್ನು ಮಾಡುತ್ತ, ಬಹುಕಾಲ ತಪಸ್ಸು ಮಾಡಲು, ಬ್ರಹ್ಮನು ಮೆಚ್ಚಿ ಅವನಿಗೆ ಪ್ರತ್ಯಕ್ಷನಾದನು. ಪಾಪ! ಪ್ರತ್ಯಕ್ಷನಾಗದೆ ಏನು ಮಾಡ್ಯಾನು! ಬ್ರಹ್ಮದೇವರನ್ನು ಪೂಜಿಸುವವರಾಗಲಿ, ಧ್ಯಾನಿಸುವವರಾಗಲಿ ಇಲ್ಲವೇ ಇಲ್ಲ. ಯಾರಾದರೂ ತಮ್ಮ ಚಿಕ್ಕಮಕ್ಕಳಿಗೆ ಕಾಡುತ್ತಾನೆಂದು ತಿಳಿದು, ತಾವಾಗಿಯೇ ಎಂದಾದರು ಬಾಳೆಹಣ್ಣು, ಉತ್ತತ್ತಿ ಮುಂತಾದವುಗಳನ್ನು ಅರ್ಪಣ ಮಾಡಿದಾಗ್ಗೆ ಬ್ರಹ್ಮನಿಗೆ ಏನಾದರೂ ಸಿಕ್ಕುವದೇ ಹೊರ್ತು ಬೇರೆ ಇಲ್ಲ. ಅಂದಮೇಲೆ ಹೀಗೆ ಘೋರ ತಪಸ್ಸನ್ನು ಮಾಡಿದವನನ್ನು ಎಂದಾದರೂ ಉಪೇಕ್ಷಿಸುವನೇ? ಕೂಡಲೆ ಬೇಡಿದ ವರಗಳನ್ನು ಕೊಡಲು ಸಿದ್ಧನಾದನು. ಮಲ್ಲಾಸುರನಾದರೂ ತನಗೆ ಬೇಕಾದಂಥ ವರಗಳನ್ನು ಬೇಡಿಕೊಂಡನು. ಹೀಗೆ ಅಜೇಯನಾದ ಮಲ್ಲಾಸುರನು ಇಂದ್ರಾದಿ ದೇವತೆಗಳನ್ನು ತನ್ನ ಅಂಕಿತರನ್ನಾಗಿ ಮಾಡಿಕೊಂಡು, ಋಷಿಗಣಕ್ಕೆಲ್ಲ ಪರಿಪರಿಯಾಗಿ ತಾಪ ಕೊಡಹತ್ತಿದನು.

ಮಣಿಚೂಲವೆಂಬ ಪರ್ವತದಲ್ಲಿ ಧರ್ಮಪುತ್ರರಾದ ಏಳು ಜನ ಋಷಿಗಳು ಆಶ್ರಮಗಳನ್ನು ಕಟ್ಟಿಕೊಂಡು, ತಮ್ಮ ಕುಟುಂಬ ಸಮೇತರಾಗಿ ಘೋರ ತಪ

ಸ್ಸನ್ನಾಚರಿಸುತ್ತಿದ್ದರು. ಬ್ರಾಹ್ಮಣನಲ್ಲಿರಬೇಕಾದ ಸಪ್ತ ಗುಣಗಳೇ ಸಾಕಾರ ವಾಗಿ ನಿಂತಿರುವವೋ ಎಂಬಂತೆ, ಆ ಋಷಿಗಳು ರಾಜಿಸುತ್ತಿದ್ದರು. ಆ ಸಪ್ತ ಗುಣಗಳೆಂದರೆ:—

ಸತ್ಯಂ ದಾನಂ ಕ್ಷಮಾ ಶೀಲಂ ಆನೃಶಂಸ್ಯಂ ತಪೋ ಘೃಣಾ ||
ದೃಶ್ಯಂತೆ ಯತ್ರ ನಾಗೇಂದ್ರ ಸ ಬ್ರಾಹ್ಮಣ ಇತಿ ಸ್ಮೃತಃ ||೧||

ಅಂದರೆ:-ಸತ್ಯವು, ದಾನವು, ಕ್ಷಮೆಯು, ಶೀಲವು, ಅಹಿಂಸೆಯು, ತಪವು ಮತ್ತು ದಯೆಯು ಇವೇ ಸಪ್ತ ಗುಣಗಳು ಯಾವನಲ್ಲಿರುವವೋ, ಅವನಿಗೇ ಬ್ರಾಹ್ಮಣ ನೆಂದೆನ್ನಬೇಕೆಂದು ಧರ್ಮರಾಜನು ಅಜಗರ ಜನ್ಮದಲ್ಲಿದ್ದ ನಹುಷನನ್ನು ಕುರಿತು ಹೇಳಿರುವನು. ಈ ಸಪ್ತ ಗುಣಗಳೇ ಮೂರ್ತಿಮಂತವಾಗಿ ಬಂದಿರುವಂತೆ, ಆ ಧರ್ಮಸುತರು ಛಪ್ಪುತ್ತಿದ್ದರು. ಅವರ ತಪಃಪ್ರಭಾವದಿಂದ ಆಶ್ರಮದಲ್ಲಿಯ ಫಲವೃಕ್ಷಗಳು ಸದಾ ಫಲಭರಿತವಾಗಿರುತ್ತಿದ್ದವಲ್ಲದೆ, ಪರಸ್ಪರ ವಿರೋಧ ಸ್ವಭಾ ವದ ಹಾವು-ಮುಂಗಲಿ, ಬೆಕ್ಕು-ಇಲಿ, ಹುಲಿ-ಚಿಗರಿ ಮೊದಲಾದ ಪ್ರಾಣಿಗಳು ತಮ್ಮ ತಮ್ಮ ನೈಸರ್ಗಿಕ ವಿರೋಧಭಾವವನ್ನೂ ಕೂಡ ಮರೆತು, ಪರಸ್ಪರ ಮೈತ್ರಿಯಿಂದ ವರ್ತಿಸುತ್ತಿದ್ದವು.

ಒಂದು ದಿನ ಮಲ್ಲದೈತ್ಯನು ಬೇಟೆಯನ್ನಾಡುತ್ತ, ತನ್ನ ಪರಿವಾರದೊಂ ದಿಗೆ ಆ ಪವಿತ್ರವಾದ ಮಣಿಚೂಲ ಪರ್ವತಕ್ಕೆ ಬಂದು, ಆ ಋಷಿಗಳ ಆಶ್ರಮ ಗಳನ್ನೆಲ್ಲ ಧ್ವಂಸಮಾಡಿದನು; ಅಲ್ಲಿರುವ ಆಕಳುಗಳನ್ನೆಲ್ಲ ಕೊಂದನು; ಋಷಿಪತ್ನಿ ಯರನ್ನು ತಾಪಗೊಳಿಸಿದನು; ಋಷಿಗಳ ದೀರ್ಘವಾದ ಜಡೆಗಳನ್ನು ಹಿಡಿದು, ನೀರಲ್ಲಿ ಮುಣುಮುಣುಗಿಸಿ ಎದ್ದೆದ್ದಿ ನೋಡಿದನು. ಹೀಗೆ ಅನೇಕ ಪರಿಯಿಂದ ತಾಪಗೊಳಿಸಿದರೂ, ಆ ಶಾಪಶಕ್ತರಾದ ಋಷಿಗಳು ಪರಮ ಶಾಂತರಾಗಿದ್ದುದ ರಿಂದ, ಅದೆಲ್ಲವನ್ನೂ ಪಿಟ್ಟೆನ್ನದೆ ಸಹಿಸಿಕೊಂಡರು. ಯಾಕಂದರೆ ಶಾಪ ಕೊಟ್ಟರೆ ತಮ್ಮ ತಪಸ್ಸು ನಾಶವಾಗುವದೆಂಬುದನ್ನು ಅವರು ಅರಿತಿದ್ದರು. ಅವರ ಸ್ವಭಾ ವಕ್ಕೂ ನಮ್ಮ ಸ್ವಭಾವಕ್ಕೂ ಇರುವ ಮಹದಂತರವನ್ನು ನೋಡಿರಿ. ಶಾಪ ವನ್ನು ಕೊಟ್ಟು ಸುಟ್ಟುಬಿಡುವಷ್ಟು ಶಕ್ತಿಯು ತಮ್ಮಲ್ಲಿದ್ದರೂ, ತಮ್ಮ ಪುಣ್ಯ ಹಾನಿಯಾಗುವದೆಂದು ಅವರು ಇಂದ್ರಿಯನಿಗ್ರಹ ಮಾಡುವದಕ್ಕೂ, ನಮ್ಮಲ್ಲಿ ಯಾವ ಶಕ್ತಿ ಇಲ್ಲದಿದ್ದರೂ, ಮನಬಂದಂತೆ ನಮಗೆ ಕೇಡು ಮಾಡಿದವರನ್ನು ಶಪಿಸಿ, ಅಪರೂಪವಾಗಿ ಇರುವುದಾದ ಅಲ್ಪ ಸ್ವಲ್ಪ ಪುಣ್ಯವನ್ನು ಹಾಳು ಮಾಡಿಕೊಳ್ಳುವ ನಮ್ಮ ಸ್ವಭಾವಕ್ಕೂ ಎಷ್ಟು ಅಂತರವು?

ಆ ರಾಕ್ಷಸ ರಾಜನೂ, ಆತನ ಪರಿವಾರವೂ ಹೊರಟು ಹೋಗುವ ವರೆಗೂ ಸುಮ್ಮನೆ ಇದ್ದು, ನಂತರ ಆ ಧರ್ಮಸುತರು ಆ ದೈತ್ಯರಿಂಜ್ಞನ ಪಾರು ಪತ್ಯವನ್ನು ಮಾಡಿಸಲೋಸುಗ ದೇವರಾಜನಾದ ಇಂದ್ರನಲ್ಲಿಗೆ ಹೋದರು. ಅಷ್ಟದಿಕ್ಪಾಲಕರೂ, ಅಪ್ಸರಸ್ತ್ರೀಯರೂ, ಅನೇಕ ಋಷಿಗಳೂ ಓಲೈಸುತ್ತಿರಲು, ಸುಧರ್ಮವೆಂಬ ತನ್ನ ಸಭೆಯಲ್ಲಿ ದಿವ್ಯ ಸಿಂಹಾಸನದಲ್ಲಿ ಪ್ರಕಾಶಿಸುತ್ತಿದ್ದ ಆ ಶಚೀ ರಮಣನು ಈ ಧರ್ಮಸುತರನ್ನು ಕಂಡಕೂಡಲೆ ಚಟ್ಟನೆ ತನ್ನ ಸಿಂಹಾಸನದಿಂದಿಳಿದು, ಅವರಿಗೆ ನಮಸ್ಕರಿಸಿ ಕುಶಲವಾರ್ತೆಯನ್ನು ಕೇಳಲು, ಆ ಋಷಿಗಳು ಮಲ್ಲಾಸುರನಿಂದ ತಮಗೊದಗಿದ ಕಷ್ಟವನ್ನು ನಿರೂಪಿಸಿ, ಇಂದ್ರನನ್ನು ಬೇಡಿಕೊಂಡದ್ದೇನಂದರೆ:—

ರಾಗ—ಶಂಕರಾಭರಣ.　ತಾಳ—ರೂಪಕ.

ಪೊರೆಯೊ ಬೇಗನೇ ನೀ | ಚರಣ ದಾಸರನ್ನು ಹರಿಯೆ ||ಪಲ್ಲ||
ಆರುಕಾಯ್ವರಿಲ್ಲವೈಯ್ಯೊ | ಘೋರಸಮಯದಿಂದಲೆಮ್ಮನು ||
ದೂರಿಕರಿಸದೆ ಕರುಣ ಶರಧಿ | ಪೊರೆಯೊ ಬೇಗನೇ ||೧||
ದುರುಳ ಮಲ್ಲನನ್ನು ತರಿದು | ಶರಣ ಜನರ ಪೊರೆವನೆಂಬ ||
ಬಿರುದನುಳಿಸಿಕೊಳ್ಳೊಸುರಪ | ಪೊರೆಯೊ ಬೇಗನೇ ||೨||

ಋಷಿಗಳ ಕರುಣಾವಚನವನ್ನು ಕೇಳಿ, ಕೈಸಾಗದ ಇಂದ್ರನು ಬಹಳ ಖಿನ್ನನಾಗಿ, ಅವರನ್ನು ಕುರಿತು:-"ಮಹಾತ್ಮರೇ, ಆ ದೈತ್ಯರು ಘೋರತಪಸ್ಸಿನಿಂದ ಬ್ರಹ್ಮದೇವರನ್ನು ಮೆಚ್ಚಿಸಿ, ಆ ದೇವನ ವರ ಬಲದಿಂದ ನಮ್ಮೆಲ್ಲರಿಗೆ ಅಜೇಯ್ಯರಾಗಿರುವರು. ಅವರನ್ನು ಕೊಲ್ಲುವದು ಆ ಕೈಲಾಸದೊಡೆಯನಾದ ಗಿರಿಜಾರಮಣನೊಬ್ಬನಿಗೇ ಸಾಧ್ಯವೇ ಹೊರತು, ಅನ್ಯರಿಗೆ ಎಂದೂ ಸಾಧ್ಯವಿಲ್ಲ. ನಾನೂ ಸಹ ಅವರಿಗೆ ಅಂಜಿ, ದಿಕ್ಪಾಲಕರೊಡಗೂಡಿ ಪ್ರಸಂಗಾನುಸಾರವಾಗಿ ಅವರ ಸೇವೆಯನ್ನು ಮಾಡಬೇಕಾಗುವದು. ಅಂದಮೇಲೆ ನಿಮ್ಮ ಕಷ್ಟವನ್ನು ನಿವಾರಿಸುವದು ನನ್ನಿಂದ ನೀಗದ ಮಾತು. ನೀವು ಮೊದಲು ವೈಕುಂಠಕ್ಕೆ ಹೋಗಿ, ಆ ಪ್ರಭುವಾದ ನಾರಾಯಣನಿಗೆ ಹೇಳಿಕೊಳ್ಳಿರಿ. ಆ ದೇವನು ಬ್ರಾಹ್ಮಣ ಪ್ರಿಯನು. ನಿಮ್ಮನ್ನು ಕರಕೊಂಡು ಕೈಲಾಸಕ್ಕೆ ಹೋಗಿ, ಮಹಾದೇವನಾದ ಆ ಕಲ್ಪಾಂತ ಭೈರವನಿಂದ ಆ ದೈತ್ಯರನ್ನು ಕೊಲ್ಲಿಸುವನು" ಎಂದು ನುಡಿಯಲು, ಆ ತಪೋಧನರು, ತಮ್ಮ ದುರ್ದೈವದಿಂದಲೇ ಇಂದ್ರನೂ ಕೂಡ ಆ ದೈತ್ಯರಾಜನನ್ನು ದಂಡಿಸಲು ಅಸಮರ್ಥನಾದನೆಂದು, ತಮ್ಮ ದೈವವನ್ನು ಮನಸ್ಸಿನಲ್ಲಿಯೇ

ಹಳಿಯುತ್ತ ಇಂದ್ರನನ್ನು ಆಶೀರ್ವದಿಸಿ, ವೈಕುಂಠಕ್ಕೆ ತೆರಳಿದರು.

ನಂತರ ಆ ಮುನಿಗಳು ಆಕಾಶ ಮಾರ್ಗದಿಂದ ನೆಟ್ಟಗೆ ಆ ಮಹಾವಿಷ್ಣು ವಿನ ಮಂದಿರದ ಅಂಗಳಕ್ಕೆ ಇಳಿದರು. ಅಲ್ಲಿ ದಿವ್ಯವಾದ ವೈಷ್ಣವ ಸಭೆಯಲ್ಲಿ ನೀಲವರ್ಣದ ಕಮಲದಂತೆ ಪರಿಶೋಭಿಸುವ ಅಂಗಕಾಂತಿಯುಳ್ಳವನೂ, ಪೀತಾಂಬರವನ್ನು ಪರಿಧಾನ ಮಾಡಿದವನೂ, ವನಮಾಲೆಯುನ್ನೂ ಕೌಸ್ತುಭೋ ಪೇತವಾದ ರತ್ನಹಾರವನ್ನೂ ಕೊರಳಲ್ಲಿ ಧರಿಸಿದ ಆ ಲಕ್ಷ್ಮೀವಲ್ಲಭನನ್ನು ಕಣ್ಣು ತುಂಬ ನೋಡಿ, ಕೆಲಹೊತ್ತು ಆ ಆನಂದದಲ್ಲಿ ತಮ್ಮ ದುಃಖವನ್ನು ಮರೆತು ಸ್ತಬ್ಧರಾಗಿದ್ದು, ನಂತರ ಚೇತರಿಸಿಕೊಂಡು ನಮಸ್ಕಾರವನ್ನು ಮಾಡಿದರು. ಉಜ್ವಲವಾದ ಕಟಕ ಕೇಯೂರಾದಿಗಳಿಂದಲಂಕೃತನಾದ ಆ ಲಕ್ಷ್ಮೀಪತಿಯ ಐಶ್ವರ್ಯವನ್ನೆಷ್ಟೆಂದು ಹೇಳಬೇಕು? ಶಂಖ-ಚಕ್ರಾದ್ಯಾಯುಧಗಳು ಸಾಕಾರ ವಾಗಿ ಆ ದೇವನನ್ನು ಓಲೈಸುತ್ತಿದ್ದವು. ಆಜ್ಞಾಧಾರಕನಾದ ಗರುಡನು ಕೈ-ಜೋಡಿಸಿಕೊಂಡು ನಿಂತಿದ್ದನು. ಧನ್ಯರು! ಧನ್ಯರು!! ಆ ಮುನಿಗಳೇ ಮಹಾ ಧನ್ಯರು!!! ಸಾವಿರಾರು ವರ್ಷಗಳವರೆಗೆ ಏಕನಿಷ್ಠರಾಗಿ ತಪಸ್ಸುಮಾಡಿದ ಮಹ ನೀಯರ ಧ್ಯಾನಕ್ಕೂ ಸಹ ನಿಲುಕದ ಆ ಚಿನ್ಮಯಾನಂದ ಮನ್ಮಥಜನಕನ ಅಪ್ರ ತಿಮ ಸ್ವರೂಪವನ್ನು ಚರ್ಮಚಕ್ಷುಗಳಿಂದ ನೋಡಿದ ಆ ಧರ್ಮಪುತ್ರರೇ ಧನ್ಯರು. ಆ ಋಷಿಗಳ ಕಣ್ಣುಗಳೊಳಗಿಂದ ಜಲವು ಉಕ್ಕೇರಿ ಸುರಿಯಹತ್ತಿತು. ಅದೇನು ಆನಂದಾಶ್ರುಪ್ರವಾಹವೋ, ದುಃಖಾಶ್ರುಪ್ರವಾಹವೋ ಆ ಋಷಿ ಗಳಿಗೇ ಗೊತ್ತು.

ಭಗವಂತನನ್ನು ಕಂಡು ಆ ಋಷಿಗಳು ತಮ್ಮ ದೇಹಯಷ್ಟಿಗಳನ್ನು ನಡು ಗಿಸುತ್ತ, ಕರಗಳನ್ನು ಜೋಡಿಸಿ, ಬಿಗಿದ ಕಂಠದಿಂದ, ಆ ಜಗದ್ರಕ್ಷಕನನ್ನು ನಿಗ ಮಾಗಮಗಳಿಂದ ನಾನಾ ಪರಿಯಾಗಿ ಸ್ತೋತ್ರ ಮಾಡಲು, ಸಂತುಷ್ಟನಾದ ಭಗ ವಂತನು ಪುತ್ರವಾತ್ಸಲ್ಯದಿಂದ ಅವರನ್ನು ಆಲಿಂಗಿಸಿ, ಅವರು ಖಿನ್ನರಾಗಿ ತನ್ನಲ್ಲಿಗೆ ಬಂದ ಕಾರಣವನ್ನು ಕೇಳಲು, ಋಷಿಗಳು:—

ರಾಗ—ಸಾವೇರಿ. ತಾಳ—ಆದಿ.

ಏನು ಗತಿಯೋ ಫಣಿರಾಜ ಶಯನ ‖ ದುರುಳ ಮಣಿ-ಮಲ್ಲಾಸುರ
ಬಾಧೆಲಿ । ಪಾರುಗಾಣದೆ ಪರಿತಾಪಪಡುವೆವೊ ‖ಪಲ್ಲ‖
ಆಶ್ರಮಗಳು ವಿಧ್ವಸ್ತವಾದವೊ । ನಾಶವೈದಿದವೋ ಹೋಮಶಾಲೆಗಳು
ಅಸುವಳಿದವೊ ಸುಮನಸ ಧೇನುಗಳು ‖೧‖

ಪಾಪಾತ್ಮರ ಘನತಾಪದಿ ನಾವತಿ | ಕೋಪಿಸಿ ಶಾಪವ ನೀಯಲು ಗೈದಿಹ |
ತಾಪಸ ಪುಣ್ಯವು ನಾಶಪೊಂದುವದೊ ||೨||
ಪುರುಹೂತನು ಕರ ಸೋತಿಹನ್ಯೆಯ್ಯೊ | ಮುರಹರ ಪೊರೆಯೋ
ಕರುಣದಲೆಮ್ಮನು || ಶರಣಾಗತ ಪರಿತ್ರಾಣ ಧುರಂಧರ ||೩||

ಹೀಗೆ ಮೊರೆಯಿಡಲು, ನಾರಾಯಣನು:-"ಮುನಿಗಳೇ, ನೀವು ಹೇಳುವದೆಲ್ಲವೂ ನಿಜವು; ಆದರೆ ಬ್ರಹ್ಮನ ವರಬಲದಿಂದ ಆ ದೈತ್ಯರು ನನಗೂ ಸಹ ಅಜೆಂಕ್ಯರಾಗಿರುವರು" ಎಂದು ನುಡಿದದ್ದನ್ನು ಕೇಳಿದ ಕೂಡಲೆ, ಋಷಿಗಳು ಹತಾಶರಾಗಿ ಕಣ್ಣೀರುಸುರಿಸುತ್ತ:—

ಆರಿಗೆ ಶರಣ್ಯೆದುವದೈ ಈಗಲ | ಪಾರು ಕಾಯ್ವರೀ ಘೋರಸಮಯದಿ ||
ಹರಹರ ಕಷ್ಟದಿ ಪಾರುಗಾಣೆವೊ ||೪||

ಎಂದು ನುಡಿದು ನಿಶ್ಚೇಷ್ಟರಾಗಿ ಭೂಮಿಗೆ ಬೀಳಲು, ಕರುಣಾಸಾಗರನಾದ ಭಗವಂತನು ಅವರನ್ನು ಸಮಾಧಾನಗೊಳಿಸಿ:-"ಮುನಿಗಳೇ, ನನಗೆ ಅವರು ಅಜೆಂಕ್ಯರೆಂದು ಹೇಳಿದ ಮಾತ್ರಕ್ಕೇ ನೀವು ಹತಾಶರಾಗಬೇಕೆ? ಬೇಡ. ನನ್ನಿಂದ ಅವರಿಗೆ ಮರಣವಿಲ್ಲದಿದ್ದರೂ ಮಹೇಶ್ವರನಾದ ಶ್ರೀ ಶಿವನಿಂದ ಅವರು ವಧ್ಯರು. ಆ ಕಲ್ಪಾಂತ ಭೈರವನಿಗೆ ಅಸಾಧ್ಯವಾದದ್ದಾವುದೂ ಇಲ್ಲ; ಆದ್ದರಿಂದ ನಾವೆಲ್ಲರೂ ಕೈಲಾಸಕ್ಕೆ ಹೋಗಿ, ಆ ಮಹಾದೇವನಿಗೆ ಬೇಡಿಕೊಂಡು, ಆ ದೈತ್ಯರಾಜನನ್ನು ನಾಶಗೊಳಿಸೋಣ ನಡೆಯಿರಿ" ಎಂದು ಆ ಮುನಿಗಳೊಡಗೂಡಿ ಕೈಲಾಸ ಪರ್ವತಕ್ಕೆ ಹೊರಟರು.

ತಾವು ಅಂದಿನವರೆಗೆ ಗೈದ ತಪಶ್ಚರ್ಯದ ಪುಣ್ಯದ ರಾಶಿಯೋ ಅಥವಾ ಜಗತ್ರಿನ ಪುಣ್ಯವೆಲ್ಲ ಒಂದೆಡೆಯಲ್ಲಿ ಕಲೆತು ರಾಶಿಯಾಗಿರುವದೋ, ಇಲ್ಲವೆ ಶಿವನ ಕರುಣಾರಸವೆಂಬ ಅಮೃತದಲ್ಲಿ ಚಂದ್ರನನ್ನು ಪುಡಿಮಾಡಿ ಕಲಿಸಿ ಒಟ್ಟಿರುವದೋ ಅಥವಾ ಆ ಕರ್ಪೂರಗೌರನಾದ ಪರಶಿವನು ತನ್ನ ನಿವಾಸಸ್ಥಾನವನ್ನು ಕರ್ಪೂರದ ಚೂರ್ಣ ಇಲ್ಲವೆ ಮುತ್ತುಗಳ ಹುಡಿಯಿಂದ ರಚಿಸಿಕೊಂಡಿದ್ದನೋ ಎಂಬಂತೆ ಶುಭ್ರಾತಿಶುಭ್ರವಾದ ಆ ಕೈಲಾಸಗಿರಿಯಲ್ಲಿಯ ಶಿವಸಭಾಸ್ಥಾನವನ್ನು ದೂರದಿಂದ ನೋಡಿದ ಕೂಡಲೆ, ಹತ್ತಿಕ್ಕಿದ್ದ ದುಃಖವು ಹಿತಚಿಂತಕರ ದರ್ಶನದಿಂದ ಉಕ್ಕೇರಿ ಬರುವಂತೆ ಆ ಧರ್ಮಸುತರ ದುಃಖವು ಉಕ್ಕೇರಿ ಅವರು ಅಲ್ಲಿಂದಲೇ ಆ ಕರುಣಾಮೃತಾರ್ಣವನಾದ ಜಗನ್ನಾಯಕನನ್ನು ಆರ್ತಸ್ವರದಿಂದ ನುತಿಸಹತ್ತಿದರು:-

ರಾಗ—ಬಿಲಹರಿ. ತಾಳ—ಆದಿ.

ಸುರವರ ಗುರುವರ ಧರಣಿಧರಚಾಪವರ || ಉರುಗಾಧಿಪ ಕುಂಡಲಧರ ಸುಂದರ||ಪ||

ಕರಿಚರ್ಮಾಂಬರ ಕಾಲಕಾಲ ಸ್ಮರ | ಹರ ಪುರಹರ ಮುರಹರ ಶರ ಶಂಕರ ||೧||
ದೀನಸ್ವರದಿಂದ ಗೈದ ಸ್ತೋತ್ರವು ದೂರದಿಂದ ಕಿವಿಗೆ ಬಿದ್ದ ಕೂಡಲೆ, ಶಂಭುವು ಭೃಂಗಿಯ ಕಡೆಗೆ ನೋಡಲು, ಪ್ರಭುವಿನ ಇಂಗಿತವನ್ನರಿದು ಅವನು ಆ ಮುನಿಗಳನ್ನು ಎದುರ್ಗೊಂಡು, ಅವರ ದುಃಖವನ್ನು ನೋಡಿ:-"ನಿಮ್ಮಂಥ ಜ್ಞಾನಿಗಳು ದುಃಖಪಡಬೇಕೇ? ಜನ್ಮಾಂತರದ ಕರ್ಮಫಲವು ಬಿಡತಕ್ಕದ್ದಲ್ಲವು. ಅದಕ್ಕಾಗಿ ಮರಗುವರೆ? ಶಿವಸಾರೂಪ್ಯವನ್ನು ಪಡೆದರೂ, ಅದು ನನಗೂ ಬಿಟ್ಟಿರುವದಿಲ್ಲ:

ಶಿವಪಾದಾಂಭೋಜ ಚಿಹ್ನಂ ಶಿರದಿ ಗಿರಿಜೆಗುಂ ಪುತ್ರವಾತ್ಸಲ್ಯಮೆನ್ನೊಳ್ |
ಶಿವಮಾಗಿರ್ಪ ಪ್ರಸಾದಂ ತನಗೆ ನಿಜ ತಪೋಲಬ್ಧಮೆಂತಾದೊಡುಂ ಮೇಣ್ ||
ಶವನಾಡಿ ಚೀರ್ಣ ಚರ್ಮಾಸ್ಥಿಗಳ ತನುವಿನೊಳ್ ಪೊತ್ತುಕೊಂಡಿರ್ಪೆನಾಗಳ್ |
ತವೆ ಜನ್ಮಾಂತರ್ಯದೋಷಂ ಬಿಡುವುದೆ ಜಗದೊಳ್ ಶೈವಸಾರೂಪ್ಯಮಿರ್ದುಂ ||

ಹೀಗೆಂದು ಅವರಿಗೆ ಸಮಾಧಾನವನ್ನು ಹೇಳಿ ಅವರನ್ನು ಕರಕೊಂಡು ಶಿವಮಹಾ ಸಭೆಯ ದ್ವಾರಕ್ಕೆ ಬರಲು, ಸುವರ್ಣವೇತ್ರಧಾರಿಯಾದ ನಂದಿಯು ಅವರನ್ನು ಇದಿರ್ಗೊಂಡು ಒಳಕ್ಕೆ ಕರೆದೊಯ್ದನು. ಧರ್ಮಸುತರಾದರೂ ಆ ಪರಮ ವೈರಾಗ್ಯ ಶಾಂತತೇಜದಿಂದೊಪ್ಪುವ ಆ ಸಚ್ಚಿದಾನಂದಘನದೇವನ ಸಾನ್ನಿಧ್ಯವನ್ನು ಹೊಂದಿದ ಕೂಡಲೆ ಭಕ್ತಿಯಿಂದ ಗಡಗಡನೆ ನಡುಗುತ್ತ ಸಾಷ್ಟಾಂಗವೆರಗಿ, ಆ ಸದಾಶಿವನನ್ನು ನುತಿಸಹತ್ತಿದರು:—

ಹೇ ಮಾರಾಂತಕ ಹೇ ಕೃಪಾಜಲನಿಧೇ ಹೇ ಶೈಲಕನ್ಯಾಪತೇ |
ಹೇ ಕಾಲಾಂತಕ ಹೇ ಮುನೀಂದ್ರಕರುಣಾವಾರೀಣ ಹೇ ಶಂಕರ ||
ಹೇ ತ್ರಿಪುರಾಂತಕ ಹೇ ಗಜಾಸ್ಯಜನಕ ಹೇ ಕಾಲಕೂಟಾಶನ |
ಹೇ ರಜತಾದ್ರಿನಿಕೇತನಾಗ್ನಿನಯನ ನಃ ಪಾಹಿ ಗಂಗಾಧರ ||೧||

ಹೀಗೆ ಸ್ತೋತ್ರಮಾಡಿ ಮೇಲಕ್ಕೆದ್ದು ನೋಡಲು, ಆ ತೇಜೋಮಯ ಶಾಂತಮೂರ್ತಿಯು ದೃಗ್ಗೋಚರವಾಯಿತು. ಆ ಪರಶಿವನು ೩೨ ಸಿಂಹಗಳಿಂದೊಪ್ಪುವ ರತ್ನಮಯ ಸಿಂಹಾಸನದ ಮೇಲೆ ಕುಳಿತಿದ್ದನು. ಅವನು ವ್ಯಾಘ್ರಚರ್ಮವನ್ನು ಹೊತ್ತು, ಸರ್ಪಗಳಿಂದ ಅದನ್ನು ಮೈಗೆ ಗಟ್ಟಿಯಾಗಿ ಬಿಗಿದುಕೊಂಡಿದ್ದನು. ತ್ರಿಶೂಲ, ಡಮರು, ಖಟ್ವಾಂಗ, ಶರಾಸನ, ಪಾನಪಾತ್ರ ಮುಂತಾದ ದಶಾಯುಧಗಳನ್ನು ಧರಿಸಿದ್ದನು. ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಪಂಚ ಮುಖಗಳಿಂದ ಆತನು ಎಸೆಯುತ್ತಿದ್ದನು. ಕಾಲಕೂಟವನ್ನು ಕುಡಿದ ಆ ದೇವನ ಕಂಠವು ನೀಲವರ್ಣ

ವಾಗಿತ್ತು. ಆ ಮಹೇಶನ ಪಶ್ಚಿಮದಿಕ್ಕಿನ ಮುಖವು ಮನ್ಮಥನನ್ನು ದಹಿಸಿದ ಮೂರನೆಯ ಕಣ್ಣಿನಿಂದ ಶೋಭಿಸುತ್ತಿತ್ತು. ಉತ್ತರದಿಕ್ಕಿನ ಮುಖವು ಶುಭ್ರ ಕಾಂತಿಯುಳ್ಳದ್ದಾಗಿ ಒಪ್ಪುತ್ತಿತ್ತು. ಪೂರ್ವದಿಕ್ಕಿನ ಮುಖವು ಜಡೆ, ಗಂಗೆ, ಚಂದ್ರ ಇವುಗಳಿಂದ ಕೂಡಿ ಕೆಂಪುವರ್ಣವುಳ್ಳದ್ದಾಗಿತ್ತು. ದಕ್ಷಿಣದಿಕ್ಕಿನ ಮುಖವು ಶ್ಯಾಮವರ್ಣವುಳ್ಳದ್ದಾಗಿ, ಭಯಂಕರವಾದ ಕೋರೆದಾಡೆಗಳಿಂದಲೂ, ಸರ್ಪಾಲಂಕಾರ ರುಂಡಮಾಲೆಗಳಿಂದಲೂ ಪರಿಶೋಭಿಸುತ್ತಿತ್ತು. ಐದನೆಯ ಮುಖವು ವಿದ್ಯುಲ್ಲತೆಯಂತೆ ಪ್ರಕಾಶಿಸುತ್ತಿತ್ತು.

ಆ ಮಹೇಶನ ಎಡದೊಡೆಯ ಮೇಲೆ ಗಿರಿಜೆಯು ಒಪ್ಪುತ್ತಿದ್ದಳು. ಆ ಜಗನ್ಮಾತೆಯು ಮನೋಹರವಾದ ಕೆಂಪು ಪೀತಾಂಬರವನ್ನುಟ್ಟಿದ್ದಳು. ಆ ಆದಿಶಕ್ತಿಯ ಅವಯವಗಳ ಸೌಂದರ್ಯವು ವರ್ಣನಾತೀತವಾಗಿತ್ತು. ಆ ದೇವಿಯು ಕಾಂಚನವರ್ಣದ ಕುಪ್ಪಸವನ್ನು ತೊಟ್ಟು, ಮೈಮೇಲೆ ಅನೇಕ ರತ್ನ ವೈಡೂರ್ಯಗಳ ಆಭರಣಗಳನ್ನು ಧರಿಸಿದ್ದಳು ಆ ಸರ್ವಮಂಗಲೆಯ ಮಾಂಗಲ್ಯ ಬಲದಿಂದಲೇ ಶಿವನು ವಿಷಪಾನಮಾಡಿದ್ದರೂ ಬದುಕಿದ್ದನು.

ಗಿರಿಜಾ ಮಾತೆಯಿಂದೊಡಗೂಡಿರುವ ಆ ಪರಶಿವನನ್ನು ಕಂಡ ಕೂಡಲೆ ಆ ಧರ್ಮಸುತರ ಸುಖ-ದುಃಖಕಲ್ಪನೆಯು ನಾಶವಾದಂತಾಗಿ, ಅವರಿಗೆ ಬ್ರಹ್ಮಾನಂದದಾಯಕವಾದ ಸಮಾಧಿಯೋಗವು ಪ್ರಾಪ್ತವಾಯಿತು; ಯಾಕಂದರೆ ಪರಬ್ರಹ್ಮವಸ್ತುವೂ, ಅದರ ನಿಕಟಸಾನ್ನಿಧ್ಯದ ಮಹಿಮೆಯೂ ಹಾಗಿರುವವು:—

ವೇದ್ಯಂ ಸರ್ವ ಪರಂಬ್ರಹ್ಮ ನಿರ್ದುಃಖಮಸುಖಂಹಿಯತ್ ||
ಯತ್ರಗತ್ವಾ ನಶೋಚಂತಿ ಭವತಃ ಕಿಂ ವಿವಕ್ಷಿತಂ ||೧||

ಪರಬ್ರಹ್ಮ ಸಾನ್ನಿಧ್ಯವು ಸುಖ-ದುಃಖ ರಹಿತವಾದದ್ದೆಂದು ಮಹಾಭಾರತದಲ್ಲಿ ಹೇಳಿರುವದು. ಅದರಲ್ಲೂ, ಸದಾ ಬ್ರಹ್ಮಚಿಂತನದಲ್ಲೇ ಮಗ್ನರಾಗಿದ್ದ ಆ ಋಷಿಗಳಿಗೆ ಪ್ರತ್ಯಕ್ಷ ಪರಬ್ರಹ್ಮ ಪರಶಿವನ ಸಾನ್ನಿಧ್ಯದಲ್ಲಿ ದೇಹಾಭಿಮಾನವಿಲ್ಲದಂತಾಗಿ ಸಮಾಧಿಸುಖವು ದೊರೆತದ್ದೇನಾಶ್ಚರ್ಯ!

ಹೀಗೆ ಮುನಿಗಳು ಸುಮ್ಮನೆ ನಿಂತದ್ದನ್ನು ನೋಡಿ, ಕರುಣಾಳುವಾದ ಆ ಜಗದುದ್ಧಾರನೇ, ಅವರಿಗೆ ತಾವು ಬಂದ ಕಾರ್ಯದ ನೆನಪು ಮಾಡಿಕೊಡುವ ಪ್ರಸಂಗ ಬಂದಿತು; ಯಾಕಂದರೆ ಸದಾಶಿವನ ನಿಕಟಸಾನ್ನಿಧ್ಯದಲ್ಲಿರುವವರಿಗೆ ಪ್ರಪಂಚದ ಚಿಂತೆಯೆಲ್ಲಿಂದ ಬರಬೇಕು? ಮರಣಭಯವೂ ಕೂಡ ಸುಳಿದಾಡಲಾರದು. ಅಂತೆಯೇ ಶಿವನ ಕಂಡ ಮೇಲೆ ಯಮನ ಬಾಧೆಯೇ? ಎಂಬ ನಾಣ್ಣು

ಡಿಯು ಪ್ರಚಾರದಲ್ಲಿ ಬಂದಿರುವದು. ಆಗ್ಗೆ ಶಂಭುವು ತಾನಾಗಿಯೇ ಆ ಋಷಿ ಗಳನ್ನು ಕುರಿತು:—

ರಾಗ-ಕಾಂಬೋದಿ. ತಾಳ-ಝಂಪೆ.

ಮನೆಗೆದ್ದ ಮುನಿವರರೆ ಘನಶೋಕವೇಕೀಗ| ಅನುಮಾನದೇಡ ಗಡನರುಹಿರೈಯ್ಯ||
ಶಾಪಶಕ್ತರೆ ನಿಮಗೆ ತಾಪವೀಯುತಲೆನ್ನ|ಕೋಪಗಾಹುತಿಯಾದ ಪಾಪಿಯಾರೈ||೧||

ಹೀಗೆ ಭಗವಂತನು ಕೇಳಲು, ಆಗ್ಗೆ ಆ ಧರ್ಮಸುತರು:—

"ಏನುಗತಿಯೋ ಫಣಿರಾಜ ಭೂಷಣ |............

ಹೀಗೆಂದು ಅವರು ತಮ್ಮ ಸಂಕಟವನ್ನು ನಿವೇದನ ಮಾಡಿಕೊಳ್ಳಲು, ಭಕ್ತಾಭಿ ಮಾನಿಯಾದ ಪ್ರಭುವಿಗೆ ಕಡುಕೋಪವುಂಟಾಗಿ:—

ಚಿಂತೆ ನೀಗುತಲೀಗ|ಶಾಂತರಾಗಿರಿ ಪರಮ|ದಾಂತರೇ ಗಡ ಮಲ್ಲ|ನಂತಗೈವೆ ||೨||

ಹೀಗೆ ಆ ಮುನಿಗಳಿಗೆ ಅಭಯುವನ್ನು ಕೊಟ್ಟು, ಸಭೆಯಲ್ಲಿಯ ದೇವತೆಗಳಿಗೆಲ್ಲ ರಿಗೂ ಆಜ್ಞಾಪಿಸಿದ್ದೇನಂದರೆ:—

ಏಳಿರೇತಕೆ ತಡವು ಕಾಳಗಕೆ ಸುರವರರೆ||ಬಾಲಕರೆಯಂಗಬಲವೇಳ್ಕೋಟಿಯ||೩||

ಯುದ್ಧಕ್ಕೆ ತಮ್ಮ ತಮ್ಮ ಸೈನ್ಯದೊಂದಿಗೆ ಕೂಡಲೆ ಸಿದ್ಧರಾಗುವಂತೆ ಎಲ್ಲ ದೇವ ತೆಗಳಿಗೂ ಆಜ್ಞೆಮಾಡಿ, ದೇವಸೇನಾನಾಯಕನಾದ ತನ್ನ ಬಾಲಕ ಷಣ್ಮುಖನಿಗೆ (ಚಿಕ್ಕಯ್ಯದೇವರಿಗೆ) ತನ್ನ 'ಏಳುಕೋಟಿ ಅಂಗಬಲ'ವನ್ನು ಯುದ್ಧಕ್ಕೆ ಕರೆಯು ವಂತೆ ಹೇಳಿ, ತನ್ನ ಭಕ್ತರ ಸಂಕಟವನ್ನು ಕೇಳಿದ ಮಾತ್ರದಿಂದಲೆ ಕೋಪವು ಹಿಡಿಸದಂತಾಗಲು:—

ವಾ. ಷ. ಅಡಿಗಡಿಗೆ ಮುಡಿನೀಡಿ ಗಡಗಡನೆ ನಡಗುತಲೆ|
ಕಡುಮಿಡುಕಿ ದೈನ್ಯದಿಂದಾಡ್ನುದನು ಕೇಳ್ದೊಡನೆ|
ಕಡುಮುಳಿದು ಪಲ್ಗಳಂ ಕಡಿವುತಲೆ ಕಣ್ಗಳಿಂ ಕಿಡಿಗಳನ್ನುದುರಿಸುತ್ತ ||
ಮೃಡ ಮುಡಿಯ ಕೊಡಿವೆದ್ದು ಫಡಫಡನೆ ತನ್ನ ಪೇ- |
ರ್ಜಡೆಯ ಪೊಡವಿಗೆ ಜಡಿಯಲಾಕ್ಷಣದಿ ಸಿಡಿಲ್ಕೋಟಿ|
ಗಡಗಡಿಸಿನುಡಿದಪರಿ ಘುಡಿಘುಡಿಸುತೊಡನೆ ನೆಲಜಡಿದೇಳಿಕಿಡಿಮಾರಿಯು||
ಉಡುಗಡಣವುದುರೆ ಗಡಗಡನೆ ನಡುಗಲ್ಪೊಡವಿ|
ಪೆಡೆದಪ್ಪೆ ಗಡಬಡಿಸಲುರುಗ ದಿಗ್ದಂತಿ ಕಿವಿ|
ಗಡಚಿಕ್ಕಿ ಕಿವುಡಾಗಲೆಡಹೊಡೆ ಮೃಡಾಣಿ ಗಡಬಿಡದೆ ತಾ ಮೃಡನಪ್ಪಲು||
ಬಿಡದಲುದುರುವ ಕಣ್ಣ ಕಿಡಿಗಳಿಂ ವಡವಾಗ್ನಿ|

ಯೊಡನೇಳೆ ಕಡಲುಕ್ಕಿ ಭಡಭಡನೆ ಸಿಡಿಯೆ ಮುನಿ |
ಗಡಣ ಕೊಡಕೊಡತುಪ್ಪ ಬಿಡದಲೆರೆಯಲೊಕ್ಕೀಪವಡಗಿತ್ತೆ ಘೃತಮಾರಿಗೆ||೨||

ಹೀಗೆ ಮಹಾಮಾರಿಯು ಆರ್ಭಟಿಸಿ ಏಳಲು, ಋಷಿಗಳು ಕೊಡ ಕೊಡ ತುಪ್ಪವನ್ನು ಸುರುವಿ ಆ ದೇವಿಗೆ ಅಭಿಷೇಕ ಮಾಡಲು, ಆ ಘೃತಮಾರಿಯು (ತುಪ್ಪದ ಮಾರೆವ್ವ) ಶಾಂತಳಾದಳು. ಹೀಗೆ ಘೃತಮಾರಿಯು ಉದಯವಾದದ್ದಲ್ಲದೆ,

ಭಾ. ಪಂಚಮುಖ ಪಂಚಾಕ್ಷರೀಶತ್ರಿ |-ಪಂಚಲೋಚನ ವೀರಬಾಹುದ್ವಿ |
ಪಂಚಯುತ ಪಂಚೈಕವೊಗಪಿತ ಪಂಚಸಾಯಕನ ||
ಪಂಚಪ್ರಾಣದ ಸಂಚೆಕಾರನ | ಪಂಚಪ್ರಾಣದಿ ಪಂಚವೀರರು |
ಪಂಚಮುಖದಿಂದುದಿಸಿದರು ಪಂಚಾಯುಧವಪಿಡಿದು ||೧||

ಹೀಗೆ ಆ ಪರಮೇಶ್ವರನ ಪಂಚ ಮುಖಗಳಿಂದ ಪಂಚ ಮಹಾವೀರರು (ಪಂಚಾವೀರರು, ಕಂಚಾವೀರರು) ಉತ್ಪನ್ನರಾದರು. (ಹೀಗೆ ಪಂಚವೀರರು ಉತ್ಪನ್ನರಾದರೆಂಬ ಆಖ್ಯಾಯಿಕೆ ಇರುವದೇ ಹೊರ್ತು ಮೂಲ ಸಂಸ್ಕೃತ ಮಲ್ಲಾರಿ ಮಾಹಾತ್ಮ್ಯದಲ್ಲಿ ಇದಕ್ಕೆ ಆಧಾರವಿಲ್ಲ.)

ಇತ್ತ ಘೃತಮಾರಿಯ ಆರ್ಭಟ, ಪಂಚವೀರರ ಗಡಗಡಾಟ, ಗಡಬಿಡಿಯಿಂದ ಯುದ್ಧಸನ್ನದ್ಧರಾಗುತ್ತಿದ್ದ ದೇವ ಸೈನಿಕರ ಆಯುಧಗಳ ಖಣಖಣಾಟ, ಶಿವಗಣಗಳ ಓಡ್ಯಾಟ, ಆನೆ ಕುದುರೆಗಳ ಜಿಗಿದಾಟ, ಯೋಧರ ಕೂಗಾಟಗಳಿಂದ ಬ್ರಹ್ಮಾಂಡ ಕಟಾಹವೇ ಇಬ್ಭಾಗವಾಗುವಂತೆ ತೋರುತ್ತಿರಲು, ಮಣಿಮಲ್ಲ ಪ್ರಮುಖರಾದ ದೈತ್ಯ ಸಮೂಹಕ್ಕೆ ಈ ಜಗತ್ತಿನಿಂದಲೇ ಉಪಟಳ ಬಂತೆಂದು ಸಂತೋಷಭರಿತರಾದ ಮುನಿಗಳು ಕುಣಿದಾಡುತ್ತಿರಲು, ಆ ಕಲ್ಪಾಂತ ರುದ್ರನು ಕಡುಕೋಪಾಟೋಪದ ಮಾರ್ತಂಡಭೈರವನ ವೇಷವನ್ನು ತಾಳಿದನು. ಹೇಗಂದರೆ:—

ರಾಗ—ಶಹನ. ತಾಳ—ಆದಿ.

ಖಂಡಪರಶು ಖಂಡೇಂದುಮೌಳಿ ಮಾ | ರ್ತಂಡಭೈರವ ವೇಷವಮಂಡಿಸಿದ | ಅಂಡಜವರ ಪ್ರ | ಚಂಡ ಪರಾಕ್ರಮಿ | ಪುಂಡಮಲ್ಲ ಮುನಿ | ತಂಡವ ದಂಡಿಸ | ಲಂಡಲೆದವರಾ | ಖಂಡಲಹರಿಸಹ | ತಾಂಡವನಟ .ಪ್ರ | ಚಂಡಗೆರಗಲು ||ಪಲ್ಲ||

ಕಡಲಶಯನ ಸಿಡಿಲಾಣ್ಮ ಮುನಿಗಳೊಡಗೂಡಿ ತಾ | ಕಡುಮಿಡುಕುತ ಮುಡಿಬಾಗಿ ಕರಗಳನು ಜೋಡಿಸುತ | ಅಡಿಗೆರಗುತ ಕಡು ದೈನ್ಯದಲಾಡ್ವುದ |

ಕೇಳಿ ತಾ | ವೃಷಭಮುಡಿಕೊಡವಲ್ ಜಡೆಭಾರವು ಸಡಿಲಾಗುತ | ಅಡಿಗಡಿ ಲಂಘಿಸಿ | ಛಡಛಡಪೇರ್ಜಡೆ | ಜಡಿಯಲ್ ಪೊಡವಿಗೆ ಖಡಖಡನಬ್ಬರ್ದ | ಸಿಡಿಲೊಮ್ಮೆಯೆಗಡ | ಗಡಿಸಿದ ಪರಿಘನ | ಕಿಡಿಮಾರಿಯು ಗಡ | ಘುಡಿಘುಡಿ ಸೇಳಲು ||೧||

ಕೊರಳಲಿ ಸರಸದಿ ಮೆರೆಸುತೆ ನರಶಿರಹಾರವ | ಚರ | ಭರದಲಿ ಭಸಿತವ ನೊರೆಸಿಪೂಸಿ ಭಂಡಾರವ || ಧರಿಸುತ ಲಹಿವರ ಕುಂಡಲ ಶಿರದಿ ಕಿರೀಟವ | ಕರದಿ ತ್ರಿಶೂಲ-ಖಟ್ವಾಂಗ-ಡಮರು-ಪಾನಪಾತ್ರವ || ಶರಜಾತನು ಹರಿಯಜ ನಿರರುತಿ ಯಮ | ಪುರುಹೂತನು ಗಣಪತಿ ನರವಾಹನ | ಮರುತಾನಲ ವರುಣಾರ್ಕ ಶೀತಕರ | ಸುರಚಮು ಮೂಲ್ಬಲ ವೇಳ್ಕೋಟಿಯುತ ||೨||

ಹೀಗೆ ಮಾರ್ತಂಡಭೈರವನ ವೇಷವೂ, ಸೈನ್ಯವೂ ಸಜ್ಜಾಗಲು ಆ ದೇವನು ಶಿವ ಸಾರೂಪ್ಯವನ್ನು ಪಡೆದ ನಂದಿಕೇಶ್ವರನಿಗೆ ತನ್ನ ಮೂಲ ವೃಷಭ ರೂಪದಿಂದ ವಾಹನಕ್ಕನುಕೂಲವಾಗುವಂತೆ ಸೂಚಿಸಲು, ಆ ಭಕ್ತಾಗ್ರಣಿಯು, ಬಹುಕಾಲದಿಂದ ಕಾದಿದ್ದ ಆ ಜಗಚ್ಚಾಲಕನನ್ನು ತನ್ನ ಬೆನ್ನಮೇಲೆ ಕೂಡ್ರಿಸಿಕೊಳ್ಳುವ ಸುಯೋಗವು ಅಂದು ಲಭಿಸಿದ್ದಕ್ಕಾಗಿ ಆನಂದಾತಿರೇಕದಿಂದ ವೃಷಭ ರೂಪವನ್ನು ಧರಿಸಿ, ಕುಣಿಯಹತ್ತಿದನು:—

ವಾ. ಷ. || ನೆಗೆಯುತ್ತೆ ನಿಲ್ಲುತ್ತೆ ಚಲ್ಲದಿಂ ಪರಿವುತ್ತೆ | ಮೊಗವೆತ್ತಿ ನೋಡುತ್ತೆ ನೆಳಲಂ ನಿರೀಕ್ಷಿಸು | ತ್ತಗಿದುಪಾಯ್ಯುತ್ತೆ ಕೋಡಲಗುತ್ತೆ ಕೆಲವುತ್ತೆ ಕೆಲಕೆ ಸಾರುತ್ತುಬ್ಬುತಂ || ನಿಗರದಿಂ ನಲಿಗರ್ಚುತಂ ಪುಲ್ಲನುಲ್ಲಸಂ | ಮಿಗೆ ಮೂತ್ರಿಸುತ್ತೆ ಮೆಲ್ಕರಿವುತ್ತೆ ಬಾಲಮಂ | ನಿಗವು ತೊಲವುತ್ತೆ ನಲಿವುತ್ತೆ ನಲವೆತ್ತಿ ಬಿತ್ತರದೊಳಾ ವೃಷಭರಾಜಂ ||೧||

ಹೀಗೆ ತನ್ನ ವೃಷಭರೂಪಕ್ಕನುಸರಿಸಿ ತನಗಾದ ಮಹದಾನಂದವನ್ನು ವ್ಯಕ್ತಗೊಳಿಸಿ ವಾಹನಕ್ಕನುವಾಗಲು, ಭೃತ್ಯನ ಉಲ್ಲಾಸವನ್ನು ನೋಡಿ ನಸುನಗುತ್ತ, ಕೋಟಿ ಸೂರ್ಯಸಂಕಾಶನಾದ ಆ ಮಾರ್ತಾಂಡಭೈರವನು:—

||ಪದ|| ಮಂದಾಕಿನಿಧರ ಸುಂದರ ನಂದಿಯು ನೇರಲು | ಇಂದುಧರನ ಮೂಲ್ಬಲ ವಾನಂದದಿ ಪಾಡಲು | ವಂದಿ ವೃಂದವಾನಂದದಿ ಜಯ ಜಯವೆನ್ನಲು | ವೃಂದಾರಕ ಚಮು ಮುಂದಕೆ ಮುಂದದಿ ಸಾಗಲು || ಚಂದಿರಾಸ್ಯ ಸುರ ಮುಂದಗಮನೆರಾ | ನಂದದಿ ಚಾಮರ ಢಾಳಿಸೆ ಸುರಮುನಿ ವೃಂದ ಪ್ರಮಥರೇಳ್ಕೋಟಿಗಣಾಂಗ್ಬಲ ಚಂದ್ರಶೇಖರನೆ ಜಯ ಜಯವೆನ್ನಲು ||೧||

ಹೀಗೆ ದೇವಸೈನ್ಯವೆಲ್ಲವೂ ಮೆಲ್ಲನೆ ಆ ಕೈಲಾಸಪರ್ವತವನ್ನಿಳಿದು, ಕೆಳಗಿರುವ ವಿಸ್ತೀರ್ಣವಾದ ಸಮನೆಲಕ್ಕೆ ಬಂದು ಸಾಲ್ಗಟ್ಟಿ ನಿಲ್ಲಲು, ದೇವಸೇನಾನಾಯಕನಾದ ಗುಹನು(ಚಿಕ್ಕಯ್ಯನು) ಶ್ರೀಮನ್ಮಾರ್ತಾಂಡಭೈರವನಿಗೆ ಆ ಸೈನ್ಯವನ್ನೆಲ್ಲಾ ತೋರಿಸಿದನು. ಷಣ್ಮುಖನು ತನ್ನ ಸ್ವಂತದ, ಇಂದ್ರ, ಅಗ್ನಿ, ಯಮ, ಗಣೇಶ, ವಿಷ್ಣು, ಬ್ರಹ್ಮ, ನಿರರುತಿ, ವರುಣ, ವಾಯು, ಕುಬೇರ, ಸೂರ್ಯ, ಚಂದ್ರ ಮೊದಲಾದವರ ಸೈನ್ಯಗಳನ್ನು ತೋರಿಸಿದ ನಂತರ, ಕೈಯಲ್ಲಿ ತ್ರಿಶೂಲ, ಖಟ್ವಾಂಗಗಳನ್ನು ಪಿಡಿದು, ಗಜಚರ್ಮವನ್ನು ಹೊದ್ದುಕೊಂಡು, ಮೂರು ಕಣ್ಣುಗಳಿಂದ ಶೋಭಿಸುತ್ತಿದ್ದ ಪ್ರಚಂಡ ಸೈನ್ಯವನ್ನು ತೋರಿಸಿ:-ದೇವನೇ ಇದು ನಿನ್ನ ಏಳು ಕೋಟಿ ಅಂಗಬಲ''ವೆಂದು ಹೇಳಿದನು.

ಹೀಗೆ ಕೂಡಿದ ಸೈನ್ಯವನ್ನೆಲ್ಲ ತೋರಿಸಿದ ನಂತರ, ಸೇನಾನಾಯಕನಾದ ಕಾರ್ತಿಕೇಯನು ಮಾರ್ತಾಂಡಭೈರವನ ಅನುಜ್ಞೆಯನ್ನು ಪಡೆದು, ಆ ಸೈನ್ಯಕ್ಕೆಲ್ಲ ಮುಂದಕ್ಕೆ ಸಾಗಲಿಕ್ಕೆ ಅಪ್ಪಣೆಯನ್ನಿತ್ತ ಕೂಡಲೇ ಆ ದೇವದೇವನಾದ ಮಾರ್ತಾಂಡಭೈರವನ ಸೈನ್ಯವು ಆವೇಶದಿಂದ ಮುಂದಕ್ಕೆ ಸಾಗಿತು. ಹೇಗೆಂದರೆ:- ||ಕಟಾವ|| ಬಂತೈ ಮಾರ್ತಾಂಡನ ಸೇನೆಯು ಬಂತೈ || ಪಲ್ಲ || ಹೆಗಲೋಳ್ಮೆರೆವ ಕುಠಾರಗಳಿಂದ | ಝುಗಿಝುಗಿಸುವ ಕಠಾರಿಗಳಿಂದ | ಸಳಸಳ ಜುಳುಕಿಪ ಖಡ್ಗಗಳಿಂದ | ಥಳಥಳ ಹೊಳೆವ ಖಟ್ವಾಂಗಗಳಿಂದ | ಇಳೆಯನು ನಡುಗಿಪ ಡಮರುಗಳಿಂದ | ಮೊಳಗುವನಾದದ ಢಕ್ಕೆಗಳಿಂದ | ಪಿಡಿಯೊಳ್ಪಿಡದಿಹ ಪರಿಘಗಳಿಂದ | ಗಡಗುಟ್ಟಿಪವ ಘನಪರಶುಗಳಿಂದ || ದಿಂಡುಗಡೆವ ಭುಶುಂಡಿಗಳು | ಮುಡಿ | ಚಂಡಾಡುವ ಕೋದಂಡಗಳು | ತಾಪವನೀಯುವ ಚಾಪಗಳು | ಕಡು | ಕೋಪಾಟೋಪದ ಟೊಣಪಿಗಳು | ಕಾಲನಮೇಳವ | ಪೋಲುವ ಶೂರರ | ಶೂಲಗಳು | ತ್ರಿ | ಶೂಲಗಳು | ಘನವ್ಯಾಲಗಳು | ಭಂಡಿವಾಲಗಳು | ಜನಸಿರುವಂಕುಶ ಜಾಲಗಳು | ತಿವಿ | ತಿವಿಯಲಂ ತಡೆಯುವ ಢಾಲುಗಳು | ತೋಮರಗದೆಗಳ ಗುಂಪುಗಳು | ಕ್ರಮ | ನೇಮದಮುದ್ಗರ ಪೆಂಪುಗಳು | ಗಾಸಿಗೊಳಿಸುವ ಪಾಶಗಳಿಂದ | ನಾಶವಗೈಯ್ಯುವ ಮುಸಲಗಳಿಂದ | ಅಂತಗೊಳಿಪ ಘನಕುಂತಗಳಿಂದ | ಭ್ರಾಂತಿನೀವವರಚಕ್ರಗಳಿಂದ | ಶಕ್ತಿಶತಘ್ನಿಯಸಾಲುಗಳಿಂದ | ಯುಕ್ತರಾದ ಭಟಸಂಕುಲದಿಂದ || ೧ || ರಾಜರಾಜೇಶ್ವರ | ಮೂಜಗದೊಡೆಯನ | ನೋಜಿಗಗೊಳಿಸುವ | ಆಜಿಮುಖದಿರಾ | ರಾಜಿಪವೀರರ | ತೇಜಿಗಳು | ರಥವಾಜಿಗಳು | ಗಜರಾಜಿಗಳು || ಗಜವಾಜಿಸೇರಿ ಜ | ವ್ವಾಜಿಪರಿಮಳವ | ನೋಂಜಿಲೆಬೀರುವ |

ತೇಜೋವೀರರ | ಗಜಬಿಜಿಗೊಳಿಸುವ | ಪಾದಘಾತದಿಂ | ಮೋದದಲೇಳುವ | ಧೂಳಿ | ಕೆಂಧೂಳಿ | ಕೆಂಧೂಳಿ || ಕೆಂಧೂಳಿಯುಡರಲು | ಕಂಗಳು ಕಾಣದೆ | ನಾದದಲೆಜ್ಜೆಯು | ಸೂಚಿಪಘನ ತು | ತ್ತೂರಿಗಳು ಸುಪ್ಪೂರಿಗಳು | ರಣಭೇರಿ ಗಳು ಘನಕಾಳಿಗಳು | ನಗಾರಿಗಳು || ತುತ್ತೂರಿನಗಾರಿ | ಭೇರಿಕಾಳಿಗಳ | ಘೋರ ರವದಲಿ | ಮೋದವೀವ ಬ | ಜಂತ್ರಿ | ವಾಜಂತ್ರಿ | ವಾಜಂತ್ರಿ || ಬಜಂತ್ರಿಯು ಸ್ವರದಿಂ | ಸಂತಸಪೊಂದುತ | ಸರ್ವಶಂತ್ರ ಸ್ವ | ತಂತ್ರನ ಸೇನೆಯು || ೨ ||

ಸಾಲುಬಿಟ್ಟು ಮೇಲ್ದಪ್ಪಿ ಹಾಯ್ವ ಮದ್ದಾನೆಗಳು | ಸುರಸೇನೆಗಳು | ಜೋಲಾ ಡುವ ಕೆನ್ನಾಲಿಗೆ ಕಿರಿಕಟಿನಾಯಿಗಳು | ಸಾರಮೇಯಗಳು | ಗಂಟಲ ಕಡೆಯುತ ಕುಂಟಿಪ ಒಂಟೆಯ ಸಾಲುಗಳು | ವೇತಾಳಗಳು | ಟಂಟಣ್ಣನೆ ಜಿಗಿಜಿಗಿದಾಡುವ ನೀಲ್ಗುದುರೆಗಳು | ಪದಾತಿಗಳು | ಒಂಟರ ಗಂಟಲ ಘೋಷದ ಸುಂಟರಗಾಳಿ ಗಳು | ಗಂಟೆನಾದಗಳು | ಏಕಾನೇಕ ಮುಖಾಕ್ಷಿಕರ್ಣವಾನೀಕಗಳು | ಶಿವಾನೀ ಕಗಳು | ನಾನಾಕಾರದ ಭೂತಪ್ರೇತಪಿಶಾಚಿಗಳು | ಗಣವ್ರಾತಗಳು | ಶಾಕಿನಿ-ಡಾಕಿನಿ ಗಣಯುತರುದ್ರನ | ನಿಲಯಶೃಂಗರಜತಾಚಲದಿಂದಲಿ || ೩ ||

ಹೀಗೆ ಉಕ್ಕೇರಿದ ಮಹಾಸಾಗರದಂತೆ ಬರುತ್ತಿದ್ದ ಆ ಪ್ರಚಂಡ ಸೇನೆಯನ್ನು ನೋಡಿ ಮಲ್ಲಾಸುರನ ಚಾರರು ಭಯಗೊಂಡು ತಮ್ಮ ಒಡೆಯನಿಗೆ ಆ ವಾರ್ತೆಯನ್ನರುಹಲು, ಆ ಮಹಾದೈತ್ಯನು:-ತನ್ನ ಮೇಲೆ ಸಾಗಿಬರಲು, ಬತ್ತಲುಬುರುಕನಾದ ಆ ಶಿವನ ಯೋಗ್ಯತೆಯಲ್ಲವೆಂದು ಗದ್ದರಿಸಿ, ಆ ಚಾರ ರನ್ನು ಹೊಡದಟ್ಟಿ, ತಾನೇ ಹೊರಕ್ಕೆ ಬಂದು ಗುಡ್ಡವನ್ನೇರಿ ಮಹಾಸೇನೆ ಯನ್ನು ನೋಡಿ, ಬೆದರಿದರೂ ಅದನ್ನು ಹೊರಕ್ಕೆ ತೋರಗೊಡದೆ, ಪ್ರಳಯ ಕಾಲದ ಯಮನಂತೆ ಕೋಪಗೊಂಡು ಕಣ್ಣುಗಳಿಂದ ಕಿಡಿಗಳನ್ನುದುರಿಸುತ್ತ ಕರಕರನೆ ಹಲ್ಲುಕಡಿದು, ತನ್ನ ಸೇನಾಧಿಪರಾದ ಖಡ್ಗದಂಷ್ಟ್ರ, ಉಲ್ಕಾಮುಖ, ಕುಂತಲೋಮಾದಿಗಳನ್ನು ಹುರಿದುಂಬಿಸಿ, ಮಾರ್ತಾಂಡಭೈರವನ ಸೇನೆಯ ಇಮ್ಮಡಿ ಸೈನ್ಯವನ್ನು ಶಸ್ತ್ರಾಸ್ತ್ರಗಳಿಂದ ಸಜ್ಜುಗೊಳಿಸಿ, ದೇವ ಸೈನ್ಯವನ್ನೆಲ್ಲ ನುಂಗೇ ಬಿಡುವನೋ ಏನೋ ಎಂಬಂತೆ ಆವೇಶದಿಂದ ರಣಕ್ಕೆ ಬಂದನು. ಸಹಸ್ರಾಕ್ಷ ವೆಂಬ ರಥವನ್ನೇರಿದ ಆ ದೈತ್ಯರಾಜನ ತೇಜವು ಆ ಕಾಲದಲ್ಲಿ ನೊಂದುವಕಾಲದ ದೀಪದಂತೆ ದುಃಸಹವಾಗಿತ್ತು. ಆತನ ತಮ್ಮನಾದ ಅದ್ಭುತ ಪರಾಕ್ರಮಿಯಾದ ಮಣಿಯು, ದೊಡ್ಡ ಪರ್ವತದಂತಿರುವ ಬಲಿಷ್ಠವಾದ ಆನೆಯನ್ನೇರಿ ಅಣ್ಣನನ್ನು ಅನುಸರಿಸಿ ನಡೆದಿದ್ದನು.

ಆಗ ಉಭಯಪಕ್ಷದ ಸೈನ್ಯಗಳ ನಡುವೆ ಯುದ್ಧ ಪ್ರಾರಂಭವಾಗಲು, ಎರಡೂ ಕಡೆಯ ವೀರರು ತಮ್ಮ ಪರಾಕ್ರಮದ ಪರಮಾವಧಿಯನ್ನು ತೋರಿಸ ಹತ್ತಿದರು. ಆಗ ಸತ್ತ ಸೈನಿಕರ ಹೆಣಗಳ ರಾಶಿಯು ಪರ್ವತಪ್ರಾಯವಾಯಿತು. ರಣಭೂಮಿಯು ತುಂಬ ಹಪ್ಪೆಯನ್ನಿಡಲು, ಸ್ಥಳವಿಲ್ಲದಂತೆ ಭಿನ್ನಭಿನ್ನವಾದ ಅವಯವಗಳೇ ಕಾಣಹತ್ತಿದವು. ಹೀಗೆ ಉಭಯಪಕ್ಷದ ಸೈನ್ಯವು ಸತ್ತು ಬೀಳುತ್ತಿದ್ದರೂ ದೇವಸೈನ್ಯವು ಕಡಿಮೆಯಾಗಲಿಲ್ಲ. ದೈತ್ಯರಾಜನ ಸೈನ್ಯವು ಮಾತ್ರ ಕಡಿಮೆಯಾಗಹತ್ತಿತು. ಯಾಕಂದರೆ ಆ ಮಹಾದೇವನ ಕೃಪೆಯಿಂದ ದೇವಸೈನ್ಯದಲ್ಲಿ ಸತ್ತವರೆಲ್ಲರೂ ಪುನಃ ಸಜೀವರಾಗಿ ಏಳುತ್ತಿದ್ದರು; ಆದರೆ ಮಲ್ಲನ ಸೈನಿಕರು ಸತ್ತವರು ಪುನಃ ಏಳುತ್ತಿದ್ದಿಲ್ಲ. ಹೀಗೆ ಕ್ಷಣಕ್ಷಣಕ್ಕೂ ಕ್ಷೀಣವಾಗುತ್ತಿದ್ದ ತನ್ನ ಸೈನ್ಯವನ್ನು ನೋಡಿ ಮಲ್ಲಾಸುರನು ರೊಚ್ಚಿಗೆದ್ದು ತಾನೇ ಯುದ್ಧಕ್ಕೆ ಹೊರಡಲು ಸಿದ್ಧನಾಗಲು, ಆತನ ಸೇನಾನಾಯಕನಾದ ಖಡ್ಗದಂಷ್ಟ್ರನು ಮುಂದಕ್ಕೆ ಬಂದು ಕೈಜೋಡಿಸಿ "ದೇವಾ, ಉಗುರಿನಿಂದಾಗುವ ಕೆಲಸಕ್ಕೆ ಕೊಡ್ಲಿಯನ್ನು ಉಪಯೋಗಿಸುವರೆ? ನೀನೇ ಯುದ್ಧಕ್ಕೆ ಹೋಗುವದಾದಲ್ಲಿ ಇಂದಿನ ವರೆಗೆ ನಿನ್ನ ಅನ್ನವನ್ನುಂಡ ನಮ್ಮಂಥ ಬಲಾಢ್ಯ ಕಿಂಕರರ ಪ್ರಯೋಜನವೇನು? ಬೇಡ, ಪ್ರಭೋ ಬೇಡ; ಈ ನಿನ್ನ ಅನುಚರನಿಗಪ್ಪ ಅಪ್ಪಣೆಯನ್ನಿತ್ತು ನೋಡು."

ರಾಗ—ಕಾಂಬೋದಿ. ತಾಳ—ಝಂಪೆ.

ನೀಡುಗಡ ವೀಳ್ಯವನು ತಡೆಯದೊಡೆಯ | ತೋರುವೆನು ಸುರರೊಡಲ ದೈತ್ಯರೊಡೆಯ ||ಪ|| ಚಂಡ ಕೋದಂಡ ಭುಶುಂಡಿ ಮಂಡಿತಭುಜ | ದಂಡದಿಂ ಸುರತಂಡ ದಿಂಡುಗಡಿಪೆ || ಖಂಡಿಸುತ ಮಗ್ಗದಾದಂಡದಿಂ ವೈರಿಯ | ರುಂಡ ಮುಂಡಾದಿಗಳ ಚಂಡಾಡುವೆ ||೧||

ಹೀಗೆ ಅಪ್ಪಣೆಯನ್ನು ಕೇಳಿಕೊಳ್ಳಲು, ಆತನ ಪರಾಕ್ರಮವನ್ನು ಎಷ್ಟೋ ಕಾಳಗಗಳಲ್ಲಿ ಮನಗಂಡ ಮಲ್ಲಾಸುರನು ಅವನಿಗೆ ಯುದ್ಧಕ್ಕೆ ವೀಳ್ಯವನ್ನು ಕೊಟ್ಟು, ಕಳುಹಿದನು. ಖಡ್ಗದಂಷ್ಟ್ರನಾದರೂ ತನ್ನ ಸಂಗಡ ೫ ಲಕ್ಷ ಕುದುರೆಗಳನ್ನೂ, ೧೦ ಲಕ್ಷ ರಥಗಳನ್ನೂ, ೨೦ ಲಕ್ಷ ಗಜಗಳನ್ನೂ ತಕ್ಕೊಂಡು ಸಮರೋದ್ಯುಕ್ತನಾಗಿ ಬರಲು, ಶ್ರೀ ಮಾರ್ತಂಡಭೈರವನು ಆ ದೈತ್ಯ ಸೇನಾಪತಿಯ ಸಂಗಡ ಹೋರಾಡಲು ದೇವ ಸೇನಾನಾಯಕನಾದ ಷಣ್ಮುಖನನ್ನು ಯೋಜಿಸಿದನು. ಅಗ ಆ ದೈತ್ಯ ಸೇನಾಪತಿಯು ಷಣ್ಮುಖನನ್ನು ಕುರಿತು:-"ಎಲೈ ಬಾಲಕನೇ,

ತಾಯಿಯ ತೊಡೆಯಮೇಲೆ ಆಡುವ ವಯಸ್ಸಿನಲ್ಲಿ ನಿನಗೆ ಯುದ್ಧಾಪೇಕ್ಷೆಯು ತರವಲ್ಲ. ಯುದ್ಧದಲ್ಲಿ ನುರಿತ ನನ್ನಂಥವನೊಡನೆ ಹೋರಾಡಿ ವ್ಯರ್ಥವಾಗಿ ಪ್ರಾಣಕ್ಕೆರವಾಗಬೇಡ" ಎಂದು ನುಡಿಯಲು, ಸ್ಕಂದನು:-"ಎಲೈ ದೈತ್ಯನೇ ನಾನೊಬ್ಬನೇ ಏಕೆ? ಜಗತ್ತಿನಲ್ಲಿಯ ಎಲ್ಲ ಪ್ರಾಣಿಗಳೂ ನನ್ನ ತಾಯಿಯ ತೊಡೆಯ ಮೇಲಾಡತಕ್ಕವರೇ! ಯಾಕಂದರೆ ನನ್ನ ತಾಯಿಯು ಜಗತ್ತಿಗೇ ತಾಯಿಯು; ಆದಿಶಕ್ತಿಯು. ನನ್ನನ್ನು ಚಿಕ್ಕವನೆಂದು ಉಪೇಕ್ಷಿಸಬೇಡ ಕಂಡೆಯಾ? ತಾರಕಾಸುರ, ಸಿಂಹಮುಖ, ಪದ್ಮಾಸುರರನ್ನು ಸಂಹರಿಸಿದಾಗ ನಾನು ಹುಟ್ಟಿ ಏಳೇ ದಿವಸಗಳಾಗಿದ್ದವು. ಈಗಂತೂ ಎಷ್ಟೋ ದೊಡ್ಡವನಾಗಿರುವೆನು. ಸಿಂಹದ ಮರಿಯು ಮದ್ದಾನೆಗೆ ಅಂಜುವದೇ? ಆ ಜಗಜ್ಜನಕನ ಕೃಪೆಯೊಂದಿರಲು ನಾನು ಪ್ರಯೋಗಿಸುವ ತೃಣವೂ ನಿನ್ನ ಪಾಲಿಗೆ ವಜ್ರಪ್ರಾಯವಾಗುವದು. ನಾನು ಬಾಲಕನಾದರೂ, ನನ್ನ ಅಸ್ತ್ರ-ಶಸ್ತ್ರಗಳಿಗೆ ಬಾಲತ್ವವಿಲ್ಲ. ಬಾಲಕನೆಂದು ಮೈಮರೆಯದೆ ನಿನ್ನ ಶಕ್ತಿ ಸರ್ವಸ್ವವನ್ನೂ ಉಪಯೋಗಿಸಿ ಯುದ್ಧಮಾಡು. ಇಲ್ಲದಿದ್ದರೆ ಕೆಟ್ಟೇ" ಎಂದು ನುಡಿದು ಖಡ್ಗದಂಷ್ಟ್ರನನ್ನು ಏಕಕಾಲಕ್ಕೆ ಸಾವಿರ ಬಾಣಗಳಿಂದ ಹೊಡೆಯಲು, ಆ ದೈತ್ಯನು ಅವುಗಳನ್ನು ತಪ್ಪಿಸಿಕೊಂಡು ಸ್ಕಂದನ ಕುತ್ತಿಗೆಗೆ ಗುರಿನೋಡಿ ಹತ್ತುಸಾವಿರ ಬಾಣಗಳನ್ನು ಬಿಡಲು, ಸ್ಕಂದನ ವಾಹನವಾದ ಮಯೂರವು ತನ್ನ ಸ್ವಾಮಿಯನ್ನೆತ್ತಿಕೊಂಡು ಆಕಾಶಕ್ಕೆ ಹಾರಲು ದೈತ್ಯನ ಬಾಣಗಳೆಲ್ಲ ವ್ಯರ್ಥವಾದವು. ಅದರಿಂದ ಸಿಟ್ಟಿಗೆದ್ದ ರಾಕ್ಷಸನು ಪುನಃ ಬಾಣಗಳನ್ನು ಹೊಡೆದು, ಸೇನಾನಿಯ ರಥದ ಧ್ವಜವನ್ನೂ, ಕಿರೀಟ-ಕುಂಡಲಗಳನ್ನೂ ಕತ್ತರಿಸಲು, ಕಾರ್ತಿಕೇಯನು ರೋಷಗೊಂಡು ತನ್ನ ಉಗ್ರವಾದ ಶಕ್ತ್ಯಾಯುಧವನ್ನು ರಾಕ್ಷಸನ ಮೇಲೆ ಬಿಡಲು, ಅದು ಅವನ ಶಕ್ತಿಯನ್ನೆಲ್ಲ ಹೀರಿಬಿಡಲು ಅವನು ಸತ್ತುಬಿದ್ದನು. ಹತಶೇಷ ರಾಕ್ಷಸ ಸೇನೆಯು ಓಡಿಹೋಯಿತು. ದೇವದುಂದುಭಿಗಳು ಮೊಳಗಹತ್ತಿ ದೇವ ಸೈನ್ಯದಲ್ಲೆಲ್ಲ ಆನಂದವೇ ಆನಂದವಾಯಿತು!

ಖಡ್ಗದಂಷ್ಟ್ರನು ಮರಣಹೊಂದಲು, ಉಲ್ಕಾಮುಖನೆಂಬ ಮತ್ತೊಬ್ಬ ದೈತ್ಯವೀರನು ಮಲ್ಲಾಸುರನ ಅಪ್ಪಣೆಯನ್ನು ಪಡೆದು, ೨೦ ಲಕ್ಷ ಕುದುರೆಗಳನ್ನೂ, ೧ ಕೋಟಿ ರಥಗಳನ್ನೂ, ೫೦ ಲಕ್ಷ ಆನೆಗಳನ್ನೂ ತಕ್ಕೊಂಡು ಯುದ್ಧಕ್ಕೆ ಬರಲು, ದೇವನು ಅವನ ಸಂಗಡ ಯುದ್ಧಮಾಡಲು ಗಜಮುಖನನ್ನು ನೇಮಿಸಲು, ಆಗ ಉಲ್ಕಾಮುಖನು ನಕ್ಕು:-"ಎಲೈ, ವಾದ್ಯಪ್ರಿಯನಾದ ಗಣಪತಿಯೇ, ಇದು ಯುದ್ಧರಂಗವು. ನೀನು ಬರತಕ್ಕ ಸ್ಥಳವಲ್ಲ, ಇಲ್ಲಿ ನಿನಗೆ

ಮೋದಕಗಳೇ ಆಗಲಿ, ಪಂಚ ಖಾದ್ಯಪದಾರ್ಥಗಳಾಗಲಿ ಸಿಗುವಂತೆ ಇಲ್ಲ. ನಿನ್ನ ಯುದ್ಧಗಳೆಲ್ಲ ವಿಘ್ನಗಳ ಸಂಗಡಲೇ ಹೊರತು ವ್ಯಕ್ತಿಗಳ ಸಂಗಡವಲ್ಲ. ಹೊರಟು ಹೋಗು. ಬೇಕಾದರೆ ಮಾದರಿಗಾಗಿ ಇಲ್ಲಿ ಸಿಗುವ ಮೋದಕಗಳನ್ನು ನೋಡು'' ಎಂದು ನುಡಿದು, ಗಣಪತಿಯನ್ನು ಅನೇಕ ಬಾಣಗಳಿಂದ ಹೊಡೆಯಲು, ಗಣಪತಿಯು ಕೋಪಿಸಿಕೊಂಡು ಉಗ್ರವಾದ ನರಸಿಂಹರೂಪವನ್ನು ತಾಳಿ, ಆ ದೈತ್ಯನನ್ನು ತನ್ನ ಹಲ್ಲುಗಳಿಂದ ಕಚ್ಚಿಹಿಡಿದು, ಕೋರೆಯಿಂದ ಹೊಡೆದು ಕೊಂದನು.

ಉಲ್ಕಾಮುಖನು ಮೃತಹೊಂದಲು, ಕುಂತಲೋಮನು ಮಲ್ಲಾಸುರನ ಅಪ್ಪಣೆಯನ್ನು ಪಡೆದು, ಯುದ್ಧಕ್ಕೆ ಬರಲು, ದೇವನು ಅವನ ಸಂಗಡ ಯುದ್ಧ ಮಾಡುವಂತೆ ಜಯನಂದಿಗೆ ಆಜ್ಞೆಯನ್ನಿತ್ತನು. ನಂದಿಯು ಕೈಯಲ್ಲಿ ತ್ರಿಶೂಲವನ್ನು ಪಿಡಿದು, ಚಂದ್ರಶೇಖರನಾಗಿ ಮೂರು ಕಣ್ಣುಗಳಿಂದ ಶೋಭಿಸುತ್ತ ಯುದ್ಧಕ್ಕೆ ಬರುವದನ್ನು ಕಂಡು ಶಂಕರನೇ ಯುದ್ಧಕ್ಕೆ ಬಂದನೆಂಬ ಭ್ರಾಂತಿಯಿಂದ ಕುಂತಲೋಮನು ಆತನನ್ನು ಮೂದಲಿಸಿ ಮಾತನಾಡಲು, ನಂದಿಯು:- ''ಎಲೈ ದೈತ್ಯನೇ, ನಾನು ಶಂಕರನಲ್ಲ. ಶಂಕರನ ಕೃಪೆಯಿಂದ ಆ ಪ್ರಭುವಿನ ಸಾರೂಪ್ಯವನ್ನು ಪಡೆದ ಶಂಕರನ ಕಿಂಕರನು'' ಎಂದು ನುಡಿದು, ಹಾಲಹಲ ವಿಷದಲ್ಲಿದ್ದಿದ ಬಾಣಗಳಿಂದ ದೈತ್ಯನನ್ನು ಹೊಡೆಯಲು, ಅವು ಆ ದೈತ್ಯನ ವಕ್ಷಸ್ಥಳವನ್ನು ಭೇದಿಸಿ ಬೆನ್ನಿನಲ್ಲಿ ಪಾರಾದವು. ಯುದ್ಧ ಮಂತ್ರಸಾಮರ್ಥ್ಯದಿಂದ ಮದೋನ್ಮತ್ತನಾದ ಕುಂತಲೋಮನು ಆ ಬಾಣಗಳನ್ನು ಸಹಿಸಿಕೊಂಡು, ಪ್ರತಿ ಬಾಣಪ್ರಯೋಗ ಮಾಡಿ, ಜಯನಂದಿಯ ಸಾರಥಿಯನ್ನು ಕೆಡವಿ, ನಂದಿಯನ್ನು ಗಾಯಪಡಿಸಿ ವಿಹ್ವಲನನ್ನಾಗಿ ಮಾಡಿ, ದೇವಸೈನ್ಯವನ್ನೆಲ್ಲ ಛಿನ್ನವಿಚ್ಛಿನ್ನ ಮಾಡುತ್ತಿರಲು, ನಂದಿಯು ಚೇತರಿಸಿಕೊಂಡು ಬೇರೊಬ್ಬ ಸಾರಥಿಯನ್ನು ತಕ್ಕೊಂಡು ಆ ದೈತ್ಯನನ್ನು ಆಗ್ನೇಯಾಸ್ತ್ರದಿಂದ ಹೊಡೆಯಲು, ದೈತ್ಯನ ಹೃದಯದಲ್ಲಿಯ ಅಮೃತವೆಲ್ಲವೂ ಸುಟ್ಟುಹೋಗಿ ಅವನು ಪ್ರಾಣಬಿಟ್ಟನು.

ಕುಂತಲೋಮನು ಮೃತನಾದ ವಾರ್ತೆಯನ್ನು ಕೇಳಿ, ಕ್ರೋಧದಿಂದ ಮಲ್ಲಾಸುರನ ಸ್ಮೃತಿತಪ್ಪಿತು. ತನ್ನ ಕಡೆಯ ಮಹಾ ಮಹಾ ವೀರರೆಲ್ಲರೂ ಮಾರ್ತಂಡಭೈರವನ ಕಡೆಯವರಿಂದ ನಿರಾಯಾಸವಾಗಿ ಮೃತಪಟ್ಟದ್ದನ್ನು ನೋಡಿ ಇನ್ನುಮೇಲೆ ಬೇರೆಯವರನ್ನು ಯುದ್ಧಕ್ಕಟ್ಟುವದರಿಂದ ಪ್ರಯೋಜನವಿಲ್ಲವೆಂದು ತಿಳಿದು, ಆ ದೈತ್ಯರಾಜನು ತಾನೇ ಯುದ್ಧಕ್ಕೆ ಸನ್ನದ್ಧನಾಗುತ್ತಿರಲು, ಅವನ ತಮ್ಮನಾದ ಮಣಿಯು ಮುಂದಕ್ಕೆ ಬಂದು ಅಣ್ಣನನ್ನು ಕುರಿತು:-''ದೈತ್ಯರಾಜನೇ,

ಇನ್ನುಮೇಲೆ ಯುದ್ಧವು ನನ್ನ ಪಾಲಿನದು. ಇದರಲ್ಲಿ ನನ್ನ ಭಾಗ್ಯೋದಯವೇ ಆಗುವದೆಂದು ನನಗೆ ಅನಿಸಹತ್ತಿದೆ. ಇನ್ನು ಜಗನ್ನಾಥನಾದ ದೇವದೇವೋತ್ತಮನ ಕೂಡ ಯುದ್ಧವೆಂದ ಮೇಲೆ ಜಯಾಪಜಯುಗಳನ್ನು ಮುಂಚಿತವಾಗಿಯೇ ಊಹಿಸಲಾಗುವದಿಲ್ಲ. ಜಯಾಪಜಯುಗಳಲ್ಲಿ ನನಗೆ ಹೇಗಾದರೂ ಜಯುವೇ ದೊರೆಯುವದು. ಅಪ್ಪಣೆಯನ್ನು ಕೊಡು'' ಎಂದು ಸಿಂಹನಾದವನ್ನು ಮಾಡಲು ಜಗವೆಲ್ಲ ನಡುಗಹತ್ತಿತು. ಆ ಮಾಯಾವಿಯಾದ ರಕ್ಕಸನು ತನ್ನ ಸಂಗಡ ಯಾವ ವಾಹನಗಳನ್ನೂ ತಕ್ಕೊಳ್ಳದೆ ಅತ್ಯನ್ತವಾದ ಅದ್ಭುತಾಕಾರವನ್ನು ತಾಳಿ ಯುದ್ಧಕ್ಕೆ ಸಾಗಿ ಬರುತ್ತಿರಲು, ಅವನ ಪಾದಾಘಾತದಿಂದ ಹೆಜ್ಜೆ ಹೆಜ್ಜೆಗೆ ಭೂಮಿಯು ತಗ್ಗು ಬೀಳುತ್ತಿತ್ತು. ಅವನು ತನ್ನ ಇಪ್ಪತ್ತು ಕರಗಳಲ್ಲಿ ಅನೇಕ ವಿಧವಾದ ಆಯುಧಗಳನ್ನು ಪಿಡಿದಿದ್ದನು ಅವನ ಪಾದದ ಕೆಳಗೆ ಸಿಕ್ಕ ದೇವಸೇನೆಯು ಸಾಯುತ್ತಿರುವದನ್ನು ಕಂಡು ಶ್ರೀಮನ್ಮಾರ್ತಂಡಭೈರವನು ತನ್ನ ಗಣಗಳಿಗೆ ಯುದ್ಧಕ್ಕೆ ಮುಂದರಿಯದಂತೆ ಪ್ರತಿಬಂಧವಮಾಡಿ, ಸ್ವತಃ ಪಾದಚಾರಿಯಾಗಿಯೇ ಯುದ್ಧಕ್ಕೆ ಸಾಗಿಬಂದು, ತನ್ನ ಪಿನಾಕವೆಂಬ ಧನುಷ್ಟಂಕಾರ ಮಾಡಲು:—

ಉದ್ದಂಡೇ ದೋರ್ದಂಡೇ ಹರಕೋದಂಡೇ ಪರಿಸ್ಫುರತಿ ||
ಅರಿಮಂಡಲ ರವಿಮಂಡಲ ರಂಭಾಕುಚಮಂಡಲಾನಿವೇಪಂತೆ || ೧ ||

ವೈರಿಮಂಡಲವೂ, ಸೂರ್ಯಮಂಡಲವೂ, ರಂಭಾದ್ಯಪ್ಸರೆಯರ ಕುಚಮಂಡಲಗಳೂ ನಡುಗಹತ್ತಿದವು. ಇನ್ನು ಸಾಯುವೆವೆಂಬ ಭಯದಿಂದ ವೈರಿಮಂಡಲವು ನಡುಗಿದ್ದು ಸ್ವಾಭಾವಿಕವೇ ಸರಿ; ಆದರೆ ರವಿಮಂಡವೂ ಅಪ್ಸರೆಯರ ಸ್ತನಮಂಡಲವೂ ನಡುಗುವ ಕಾರಣವೆಂದರೆ:-

ದ್ವಾವಿಮೌಪುರುಷೌಲೋಕೇ ಸೂರ್ಯಮಂಡಲಭೇದಿನೌ ||
ಪರಿವ್ರಾಡ್ಯೋಗಯುಕ್ತಶ್ಚ ರಣೇ ಶತ್ರುಮುಖೇಹತಃ ||

ಯೋಗಸಿದ್ಧನಾದ ಸಂನ್ಯಾಸಿಯೂ, ಯುದ್ಧದಲ್ಲಿ ಶತ್ರುವಿಗೆ ಅಭಿಮುಖನಾಗಿ ಸತ್ತವೀರನೂ ಸೂರ್ಯಮಂಡಲವನ್ನು ಭೇದಿಸಿ ಮೇಲಕ್ಕೆ ಹೋಗುವನಾದ್ದರಿಂದ ಮಾರ್ತಾಂಡಭೈರವನು ಯುದ್ಧಕ್ಕೆ ನಿಂತಮೇಲೆ ಆತನ ಎದುರಾಳಿಗಳೆಲ್ಲರೂ ಸಹಜವಾಗಿ ಮೃತಿಹೊಂದಿ ವೀರಸ್ವರ್ಗವನ್ನು ಪಡೆಯುವರಾದ್ದರಿಂದ ಸೂರ್ಯಮಂಡಲವು ಗಡಗುಟ್ಟಿ ನಡುಗಹತ್ತಿತು. ಇನ್ನು ಇವರೆಲ್ಲರೂ ವೀರಸ್ವರ್ಗವನ್ನು ಪಡೆದ ಮೇಲೆ, ಇವರೆಲ್ಲರ ಭೋಗಭಯದಿಂದ ಅಪ್ಸರೆಯರ ಕುಚಮಂಡಲಗಳೂ ಥರಗುಟ್ಟಿ ನಡಗುವದೇನಾಶ್ಚರ್ಯ!

ಹೀಗೆ ಶಂಭುವು ಯುದ್ಧಕ್ಕೆ ಬಂದದ್ದನ್ನು ನೋಡಿ ಮಣಿದೈತ್ಯನು:- "ಯಾಚಕೋಯಾಚಕಂ ದೃಷ್ಟ್ವಾ ಶ್ವಾನವದ್ಗುರ್ಗುರಾಯತೆ" ಅಂದರೆ ಭಿಕ್ಷುಕನು ಭಿಕ್ಷುಕನನ್ನು ಕಂಡರೆ ನಾಯಿಯಂತೆ ಗುರುಗುಟ್ಟುವದು ಯೋಗ್ಯವು. ಅದನ್ನು ಬಿಟ್ಟು ನೀನು ನಮ್ಮ ಸಂಗಡ ಜಗಳಾಡುವದೇಕೆ? ನೀನೇನೋ ಭಿಕ್ಷುಕನು ನಿಜ; ಆದರೆ ನಾನು ಭಿಕ್ಷುಕನಲ್ಲವಲ್ಲ! ಅಂದಮೇಲೆ ಶ್ರೀಮಂತರ ಕೂಡ ಭಿಕ್ಷುಕರು ಹೋರಾಡಿದರೆ ಆಗುವ ಪರಿಣಾಮವು ನಿನಗೆ ಗೊತ್ತಿಲ್ಲವೆ? ಬಡವನಸಿಟ್ಟು ದವಡಿಗೆ ಮೂಲ"ವೆಂಬುವದನ್ನು ನೀನು ಕೇಳಿಲ್ಲವೆ? ಎಂದು ಹಂಗಿಸಿ ಮಾತನಾಡಲು, ಶಂಭುವು ಕೋಪದಿಂದ ಆ ದೈತ್ಯನ ತಲೆಯ ಮೇಲೆ ತನ್ನ ಗದೆಯಿಂದ ಹೊಡೆಯಲು, ದೈತ್ಯನು ಆ ಪೆಟ್ಟನ್ನು ನಿರಾಯಾಸವಾಗಿ ತಪ್ಪಿಸಿಕೊಂಡು, ಆ ದೇವನ ಮೇಲೆ ಬಾಣಗಳ ಮಳೆಗರೆಯಲು, ಶಂಭುವು ಅವುಗಳನ್ನೆಲ್ಲ ಚೂರು ಚೂರು ಮಾಡಿದನು. ಹೀಗೆ ಕೆಲಹೊತ್ತು ಪರಸ್ಪರ ಬಾಣಪ್ರಯೋಗ ಮಾಡಿದ ನಂತರ, ದೇವನು ಆ ದೈತ್ಯನ ಬೆನ್ನಟ್ಟಿ ಚಂದ್ರಹಾಸವೆಂಬ ಆಯುಧದಿಂದ ಅವನ ತಲೆಯನ್ನು ಕಡಿಯಲು, ಮಣಿಯು ಅಷ್ಟರಲ್ಲಿ ಶರಭರೂಪವನ್ನು ತಾಳಿ, ಆ ಮಹಾದೇವನ ಭುಜವನ್ನು ಕಚ್ಚಿದನು. ಆಗ ದೇವನು ಕೃತ್ತಿಕೆಯೆಂಬ ಆಯುಧದಿಂದ ದೈತ್ಯನನ್ನು ಹೊಡೆಯಲು, ಅವನು ಔಷಧದ ಗುಳಿಗೆಯಂತೆ ಅದನ್ನು ನಿರಾಯಾಸವಾಗಿ ನುಂಗಿ ಕುದುರೆಯ ರೂಪವನ್ನು ತಾಳಿ ಏರಿ ಬರಲು, ಈಶನು ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು, ಮಣಿಯು ನೀರಿನಲ್ಲಿ ಮುಳುಗಿದನು. (ಅವನು ನೀರಲ್ಲಿ ಮುಳುಗಿದ ಸ್ಥಳವು ತುರಂಗತೀರ್ಥವೆಂದು ಪ್ರಸಿದ್ಧವಾಗಿರುವದು) ನಂತರ ಮಣಿಯು ನಿಜರೂಪವನ್ನು ಧರಿಸಿ, ಮೇಲಕ್ಕೆದ್ದು ಕುದುರೆಯನ್ನೇರಿ ಪುನಃ ಬಾಣಪ್ರಯೋಗ ಮಾಡಲು, ಶಿವನ ರುಂಡಮಾಲೆಯು ಹರಿದು ನೆಲಕ್ಕೆ ಬಿದ್ದಿತು. ಸತ್ತು ರುಂಡಮಾಲೆಯಾದವರು ಪುನಃ ಸತ್ತು ನೆಲಕ್ಕೆಬಿದ್ದರು! ಶಿವನ ಭೂಷಣಗಳಾದ ಸರ್ಪಗಳು ತುಂಡುತುಂಡಾಗಿ ಭುಸಗುಟ್ಟಹತ್ತಿದವು!! ದೈತ್ಯರ ಕ್ರೂರಸ್ಥಾನದಲ್ಲಿದ್ದ ಚಂದ್ರನಿಗೆ ಕಡತ ಕುಳಿತು, ಮರುಗುವ ಪ್ರಸಂಗ ಬಂದಿತು!!! ಹೀಗೆ ಮಣಿಯು ಏರಿ ನಿಂತದ್ದನ್ನು ನೋಡಿ ಆ ಕಲ್ಪಾಂತ ಜ್ವರವನು ಕೋಪಗೊಂಡು ಪ್ರಳಯಕಾಲದ ಅಗ್ನಿಜ್ವಾಲೆಯಂತೆ ಭಯಂಕರವಾದ ತನ್ನ ತ್ರಿಶೂಲವನ್ನು ದೈತ್ಯನ ಮೇಲೆ ಪ್ರಯೋಗಿಸಲು, ಅದು ಜನ್ಮಾಂತರದ ಕರ್ಮದಂತೆ, ತಪ್ಪದೆ ಆ ದೈತ್ಯನ ಎದೆಯನ್ನು ಸೀಳಿ ನೆಲಕ್ಕೆ ಕೆಡವಿತು. ಆಗ ಶಂಭುವು ಅವನ ಶಿರಸ್ಸನ್ನು ಮೆಟ್ಟಬೇಕೆಂದು ತನ್ನ ಪಾದವನ್ನು ಮೇಲಕ್ಕೆತ್ತಲು,

ಮಣಿಯು ತಾನೇ ಆ ಪಾದವನ್ನು ಭಕ್ತಿಪುರಸ್ಸರವಾಗಿ ಎರಡೂ ಕೈಗಳಿಂದ ಪಿಡಿದು ತನ್ನ ತಲೆಯಮೇಲಿಟ್ಟುಕೊಂಡು, ಆನಂದಪರವಶನಾಗಿ, ಆ ಮಹೇಶ ನನ್ನು ನುತಿಸಹತ್ತಿದನು:-

ರಾಗ—ಕಾನಡ. ತಾಳ—ಏಕತಾಳ.

ಪಾಹಿ ಶಿವಾಣೀ | ಪಾಹಿ ಭವಾನಿ | ಧವ ಮಹಾದೇವ ||ಪಲ್ಲ||

ಪುರಹರ ಚರಣವ ಮರೆತು ವೈರದಿಂ | ಮರುಳನಾದೆ ಭವದೊಳು ಮುಳುಗಿ ||
ಪಾರುಮಾಳ್ಪುದೈ ಕಾರುಣ್ಯಾಂಬುಧಿ | ಗಿರಿಜೇಶ | ಕರಿನಾಶ | ಗರಳಾಶನಿ ||೧||
ಅಂತರಾತ್ಮ ಸರ್ವಾಂತರ ನಿರುತ ನಿ | ರಂತರ ನಂತಕ ನಂತಕನೊ ನಿ |
ನ್ನಂತ ವರಿಯರೋ | ಕಂತುಪಿತಾದಿಗಳ್ | ಶಾಂತ | ನಿಭ್ರಾಂತ | ಶಿವಾಕಾಂತ | ನೀ ||೨||

ಹೇ ವಿರೋಧಭಕ್ತಿಯಿಂದ ಪ್ರೀತನಾಗಿರುವ ದೇವಾಧಿದೇವನೇ, ನನ್ನನ್ನು ಬಿಟ್ಟು ಎಲ್ಲಿ ಹೋಗುವೆ? ಹೋಗಲು ನಿನ್ನನ್ನು ಬಿಡುವವರಾರು? ನಿನ್ನನ್ನು ಸರ್ವಥಾ ಬಿಡುವದಿಲ್ಲ ಕಂಡೆಯಾ! ನೀನು ಸತ್ವಗುಣಪ್ರಿಯನಾಗಿದ್ದರೂ, ನಮ್ಮಂಥ ತಾಮಸ ಸ್ವಭಾವದವರಿಗೆ ವಿರೋಧಭಕ್ತಿಯಲ್ಲದೆ, ಅಳಬುರುಕ ಸತ್ವಗುಣೋಪೇತ ವಾದ ಭಕ್ತಿಯು ಹೇಗೆ ರುಚಿಸುವದು? ಸಾತ್ವಿಕಭಕ್ತಿಯೇ ಆಗಲಿ, ತಾಮಸವೇ ಆಗಲಿ ಎಲ್ಲದಕ್ಕೂ ನೀನೇ ಪ್ರೇರಕನಲ್ಲವೆ? ಅಂದಮೇಲೆ ನನ್ನ ಕಡೆ ತಪ್ಪೆಲ್ಲಿ? ಹೇ ಗಂಗಾಧರನೇ, ಚಂದ್ರಚೂಡನೇ, ಕಾಲಕಾಲನಾದ ನೀನು ಅಂತ್ಯಕಾಲದಲ್ಲಿ ನನಗೆ ದರ್ಶನಕೊಟ್ಟಿರುವೆ, ನಾನು ಕೃತಕೃತ್ಯನಾದೆನು. ನನ್ನ ವಿರೋಧಭಕ್ತಿಯು ಸಾಫಲ್ಯವಾಯಿತು. ಹೇ ತ್ರಿಯಂಬಕನೇ, ನೀನು ತ್ರಿಗುಣಗಳನ್ನು ಸ್ವಿಕರಿಸಿ, ಬ್ರಹ್ಮ, ವಿಷ್ಣು, ಮಹೇಶರೆಂಬ ಹೆಸರುಗಳಿಂದ ಮೆರೆದರೂ ನೀನು ತ್ರಿಗುಣಾ ತೀತನಾದ ಪರಮಹಂಸನು. ಹೇ ಕೃಪಾಸಾಗರನೇ, ನಿನಗೆ ಅನಂತ ನಮ ಸ್ಕಾರಗಳು.

ಹೀಗೆ ಅನೇಕ ವಿಧವಾಗಿ ಸ್ತೋತ್ರ ಮಾಡಲು, ಭಕ್ತಿ ಮುಗ್ಧನಾದ ಪರ ಮೇಶ್ವರನು ಆ ದೈತ್ಯ ಭಕ್ತನನ್ನು ಕುರಿತು:—"ಅಪ್ಪಾ ಮಣಿಯೇ! ನೀನು ಭಕ್ತ ಚೂಡಾಮಣಿಯು! ನಿನ್ನ ಭಕ್ತಿಗೆ ಮೆಚ್ಚಿದೆನು. ಬೇಕಾದದ್ದನ್ನು ಬೇಡಿಕೋ ಕೊಡುವೆನು" ಎನ್ನಲು, ಮಣಿಯು:-"ದೇವಾ, ನನ್ನ ಮೇಲೆ ದಯಮಾಡಿ ನೀನು ಪ್ರೀತನಾದದ್ದೇ ನಿಜವಿದ್ದರೆ, ನಾನು ನಿನ್ನನ್ನು ಕುರಿತು ನಿನ್ನ ಪ್ರೇರಣೆಯಿಂದ ಮಾಡಿದ ಸ್ತೋತ್ರವನ್ನು ಪಠಣ ಮಾಡುವವರ ಸಕಲ ಇಷ್ಟಾರ್ಥಗಳನ್ನೂ ನೀನು ಪೂರೈಸಿಕೊಡು. ನನ್ನ ಶಿರವು ಯಾವಾಗಲೂ ಈಗಿನಂತೆ ನಿನ್ನ ಪಾದದ ಕೆಳಗಿರಲಿ.

ಮತ್ತು ತುರುಗ ಸಮೇತವಾದ ನನ್ನ ರೂಪವು ಯಾವಾಗಲೂ ನಿನ್ನ ಸನ್ನಿಧಿಯಲ್ಲಿ ರಲಿ" ಎಂದು ಬೇಡಿಕೊಳ್ಳಲು, ಭಕ್ತಾಧೀನನಾದ ದೇವನು "ತಥಾಸ್ತು!" ಎಂದು ನುಡಿದು, ಅವನಿಗೆ ಉತ್ತಮವಾದ ಮೋಕ್ಷವನ್ನು ಕೊಟ್ಟನು. ಪರಮೇಶ್ವರನ ಕೋಪವೇ ಆಗಲಿ, ಅನುಗ್ರಹವೇ ಆಗಲಿ ಎರಡೂ ಮನುಷ್ಯನ ಉದ್ಧಾರಕ್ಕೇ ಕಾರಣಗಳಾಗುವವು.

ಯೇಯೇ ಹತಾಃ ಶೂಲಧರೇಣ ರಾಜನ್ ತ್ರೈಲೋಕ್ಯನಾಥೇನ
ತ್ರ್ಯಂಬಕೇನ ‖ ತೇ ತೇ ಗತಾಃ ಶಂಭುಪುರೀಂ ಪ್ರಯಾತಾಃ
ಕ್ರೋಧೋಽಪಿ ದೇವಸ್ಯವರೇಣ ತುಲ್ಯಃ ‖ ೧ ‖

"ಪರಮೇಶ್ವರನು ಕೊಂದಂಥ ಜನರೆಲ್ಲರೂ ಆತನ ಪಟ್ಟಣವಾದ ಕೈಲಾಸ ಪುರ ವನ್ನು ಕುರಿತು ಪ್ರಯಾಣ ಮಾಡುವವರಾದರು. ಅಂದಮೇಲೆ ದೇವರ ಕೋ-ಪವು ವರಕ್ಕೆ ಸಮಾನವಾದದ್ದು"

ಅನಂತರ ಆ ಮಣಿದೈತ್ಯನ ದೃಢಭಕ್ತಿಗೆ ಮೆಚ್ಚಿದ ಆ ಮಣಿಮರ್ದನನು ತನ್ನ ಭಕ್ತನ ಮೇಲಿನ ವ್ಯಾಮೋಹದಿಂದ ಪ್ರಸನ್ನಚಿತ್ತನಾಗಿ ಆತನ ಅಣ್ಣನಾದ ಮಲ್ಲಾಸುರನನ್ನು ರಕ್ಷಿಸಲೋಸುಗ ಅವನಲ್ಲಿಗೆ ದೂತನನ್ನು ಕಳುಹಿಸಬೇಕೆಂದು ಯೋಚಿಸಿ, ವಿಷ್ಣುವನ್ನು ಕುರಿತು:-"ಹರಿಯೇ, ನೀನು ನಿನ್ನ ಭಕ್ತ ಪ್ರಹ್ಲಾದನ ವಂಶಜನಾದ ಮಲ್ಲಾಸುರನ ಶಿಬಿರಕ್ಕೆ ಹೋಗಿ, ತನ್ನ ಪರಿವಾರ ಸಮೇತನಾಗಿ ಪಾತಾಳಕ್ಕೆ ಹೋಗುವಂತೆ ಅವನಿಗೆ ಬುದ್ಧಿಯನ್ನು ಹೇಳು; ಅಂದರೆ ಅವನು ಜೀವ ಸಹಿತನಾಗಿ ಉಳಕೊಳ್ಳುವನು; ಇಲ್ಲದಿದ್ದರೆ ಅವನ ತಮ್ಮನನ್ನು ಕೊಂದಂತೆ ಅವ ನನ್ನೂ ಸಂಹರಿಸುವೆನೆಂದು ಹೇಳು" ಎಂದು ಆಜ್ಞೆಮಾಡಲು, ವೈಕುಂಠನು (ಹೆಗ್ಗಪ್ಪನು) ಯುದ್ಧ ನಿಯಮಗಳಿಗನುಸಾರವಾಗಿ, ಯಾವ ಆಯುಧಗಳನ್ನೂ ತಕ್ಕೊಳ್ಳದೆ, ಒಬ್ಬನೇ ಆನೆಯನ್ನೇರಿ ಹೊರಟನು. ದೈತ್ಯರಾಜನಾದ ಮಲ್ಲಾ ಸುರನು ವಿಷ್ಣುವನ್ನು ಪೂಜಾದಿಗಳಿಂದ ಸತ್ಕರಿಸಿ, ಆತನು ಬಂದ ಕಾರಣವನ್ನು ಕೇಳಲು, ಮಹಾವಿಷ್ಣುವು ಅವನನ್ನು ಕುರಿತು:-"ಎಲೈ ದೈತ್ಯರಾಜನೇ, ನಿನ್ನ ವಿಪ್ಲ ಸೈನ್ಯವೂ, ನಿನ್ನ ತಮ್ಮ ಮಣಿಯೂ ಹತರಾದರು. ಇನ್ನು ನೀನೊಬ್ಬನುಳಿ ದಿರುವೆ; ನೀನೂ ವ್ಯರ್ಥವಾಗಿ ಸಾಯಬೇಡ. ನಿನ್ನ ಉಳಿದ ಪರಿವಾರವನ್ನು ತಕ್ಕೊಂಡು ಪಾತಾಳಕ್ಕೆ ಹೋಗಿ ಸುಖದಿಂದ ಬದುಕಿರು" ಎಂದು ಹೇಳಲು, ಮಲ್ಲಾಸುರನು "ಹರಿಯೆ. ನನ್ನ ಪರಾಕ್ರಮದ ನೆಲೆಯು ನಿನಗಿಲ್ಲದಿರುವದರಿಂದ ನೀನು ಹೀಗೆ ನುಡಿಯುವೆ. ಎಲೋ, ನನಗೆದುರಾಗಿ ಬದುಕುವವರು ಈ ಜಗ

ತ್ರಿನಲ್ಲಿ ಯಾರಿರುವರು? ಆ ಮಾರ್ತಾಂಡಪ್ರೈರವನೆಂದರೆ ಯಾವ ಗಿಡದ ತೊಪ್ಪಲು? ತಿಂದೇನೆಂಧರೆ ಅನ್ನವಿಲ್ಲ, ಉಟ್ಟೇನಂದರೆ ವಸ್ತ್ರವಿಲ್ಲ; ಇಂಥವನು ನನ್ನ ಸಂಗಡ ಯುದ್ಧಮಾಡಿ ಕೊಲ್ಲುವನೇ?" ಎಂದು ಉಪಹಾಸ ಮಾಡಲು, ಹರಿಯು:-

ರಾಗ—ಶಂಕರಾಭರಣ. ತಾಳ—ಆದಿ.

ಪುರಹರಮಹಿಮೆ | ಯರಿಯುವರೆ ಶಿವ ‖ ಶರಣರಲ್ಲದ ಪಾ |
ಮರ ಪಶುಗಳು ತಾವ್ ‖ ಪಲ್ಲ ‖
ದುರುಳರ ಸಂಗದಿ | ಸರಸವನಾಡುತ | ಧರೆಸಿರಿನಾರೀ ಮೋಹದಿಶಿಲುಕಿ‖
ಪರಿಪರಿ ಗರ್ವದಿ ಮೆರೆಯುತಲುರುತರ | ಪರಪೀಡೆಯ ನಿರುತದ
ಲೀಯ್ವುವರು ‖ ೧ ‖

ಮಲ್ಲಾಸುರನೇ ಕೇಳು: ಶಿವಶರಣರಿಗಲ್ಲದೆ ಶಿವನ ಮಹಿಮೆಯು ತಿಳಿಯಲಾರದು. ಅದರಲ್ಲೂ ಸದಾ ಆತ್ಮಾರಾಮನಾದ ಆ ಪ್ರಭುವಿನ ಮಹಿಮೆಯು ನಿಮ್ಮಂಥ ಮಾಯಾಪೇಕ್ಷಿತರಿಗೆ ತಿಳಿಯುವ ಬಗೆ ಹೇಗೆ? ಆತನ ಪ್ರಭಾವವು ವೇದಕ್ಕೂ ಕೂಡ ನಿಲುಕದು. ಅವನನ್ನು ಭಿಕ್ಷುಕನೆಂದೂ, ದಿಗಂಬರನೆಂದೂ ಹೀಯಾಳಿಸಬೇಡ.

ಭಿಕ್ಷುಕೋಪಿ ಸಕಲೇಪ್ಸಿತ ದಾತಾ | ಪ್ರೇತಭೂಮಿನಿಲಯೋಪಿಪವಿತ್ರಃ ‖
ಭೂತಮಿತ್ರಮಪಿಯೋಽಭಯಸತ್ರೀ | ತಂ ವಿಚಿತ್ರಚರಿತಂ ಶಿವಮೀಡೆ ‖೧‖

ಭಿಕ್ಷುಕನಾದರೂ ಭಕ್ತರಿಗೆ ಸಕಲೇಷ್ಟಪ್ರದಾಯಕನೂ, ಮಸಣವಾಸಿಯಾದರೂ ಸದಾ ಪವಿತ್ರನೂ, ಭೂತಗಣಕ್ಕೆ ಮಿತ್ರನಾದರೂ ಅಭಯಪ್ರದಾಯಕನೂ ಆಗಿರುವ ಆ ಪರಶಿವನ ಚರಿತ್ರವೇ ವಿಚಿತ್ರವಾಗಿರುವದು.

ಭೀತಿರ್ನಾಸ್ತಿ ಭುಜಂಗಪುಂಗವವಿಷಾತ್ ಪ್ರೀತಿರ್ನಚಂದ್ರಾಮೃತಾತ್ |
ನಾಶೌಚಂಹಿಕಪಾಲದಾಮಲುಲನಾತ್ ಶೌಚಂ ನ ಗಂಗಾಜಲಾತ್ ‖
ನೋದ್ವೇಗಶ್ಚಿತ ಭಸ್ಮನಾನ ಚ ಸುಖಂ ಗೌರೀ ಸ್ತನಾಲಿಂಗನಾತ್ |
ಆತ್ಮಾರಾಮತಯಾಹಿತಾಹಿತ ಸಮಃಸ್ವಸ್ಥೋಹರಃಪಾತುನಃ ‖೧‖

ಹೀಗೆ ಹಿತಾಹಿತ ಸಮನಾಗಿರುವ ಆ ಶಿವನ ಮಹಿಮೆಯು ವಿಚಿತ್ರವಾದದ್ದು. ಇಂಥ ವಿಚಿತ್ರಚರಿತನ ಕೂಡ ಕಾದುವ ಹವ್ಯಾಸ ಬೇಡ.

ರಾಗ—ಅಠಾಣ. ಅಷ್ಟತಾಳ.

ಲಾಲಿಸೆನ್ನಯ ವಚನ ನೀ ನೀಗ | ಛಲ ಶಿವನೊಳೀಗ | ಜ್ವಾಲೆಯುದು ಬಿಡು ತಡವು ಬೇಡೀಗ | ಕೊಲ್ಲುವದದೀಗ ‖ಪಲ್ಲ‖ ಜ್ವಾಲೆಲೋಚನ ಶಿವನು ಜಗಮಲ್ಲ | ಕೇಳಲೆನ್ನೊಮಲ್ಲ | ಖುಲ್ಲದುರುಳರ ಕೊಲ್ಲದಲೆ ನಿಲ್ಲ | ಕೇಳೆನ್ನ ಸೊಲ್ಲ ‖

ಸುಳ್ಳುಪೇಳುವನಲ್ಲ ಗಿರಿಜಾ । ವಲ್ಲಭನೆ ಜಗಕೊಲ್ವನೆಲ್ಲ । ನಿಲ್ಲದಲೆ ನೀ ಶರಣು ಪೋಗೆಲೋ । ಪುಲ್ಲಶರಹರನಾಣೆ ಮಲ್ಲ ॥೧॥

ಹೀಗೆಂದ ಹರಿಯ ಮಾತನ್ನು ಕೇಳಿ, ಕ್ರೋಧಸಂತಪ್ತನಾದ ಮಲ್ಲಾಸುರನು ಹರಿಯನ್ನು ಕುರಿತು:-

ರಾಗ—ಕಾಂಬೋದಿ. ತಾಳ—ರೂಪಕ

ಏನು ಮಾತುಗಳಾಡಿದಿಯೋ । ಶ್ರೀನಿಕೇತನ । ಮತಿಯಿಲ್ಲದೆ ॥ ದಾನವಾಗ್ರಣಿ ಮಾನವಂತಗೆ । ದೀನನು ಪೀನಾಂಬರ ಕೃಶಾನುರೇತನೆನಗೆ ಸಮನೆ ॥ಪ॥

ಇಂದ್ರನನ್ನು ಕೊಂದುಚಲ್ಲುವೆ । ಸಿಂಧುಶಯನ ॥ ಚಂದ್ರನನ್ನು ನುಂಗೇಬಿಡುವೆ । ವೃಂದಾರಕ ವೃಂದವೆಲ್ಲ । ವೊಂದುಬಿಡದೆ । ತಿಂದುತೇಗುವೆ ॥೧॥ ದಂಡಧರನ ಚಂಡಪಾಶವ । ತುಂಡುಗೈಯುವೆ । ಶೌರೆ ॥ ಖಂಡಪರಶು । ತಾಂಡವೇಶನ ಮುಂಡ ಗಡಿದು । ರುಂಡಮಾಲೆ । ತುಂಡುತುಂಡುಗೈವೆನಯ್ಯೋ ॥ ೨ ॥

ಹರಿಯೇ, ಯಾರಿಗೆ ಯಾವ ಮಾತುಗಳನ್ನಾಡಬೇಕೆಂಬ ಜ್ಞಾನವೂ ನಿನಗೆ ಬೇಡವೆ? ನನಗೂ, ಶಿವನಿಗೂ ಹೋಲಿಸಲಿಕ್ಕೆ ನಿನಗೆ ನಾಚಿಕೆಯಾದರೂ ಹೇಗೆ ಬರಲಿಲ್ಲ? ನಮ್ಮ ಮನೆತನದವರ ಮೇಲೆ ಹಿಂದಕ್ಕೆ ಎಂದೋ ಅಲ್ಪ ಸ್ವಲ್ಪ ಉಪಕಾರವು ನಿನ್ನಿಂದಾಗಿರುವದರಿಂದಲೂ, ನೀನು ಈಗ ದೂತನಾಗಿ ಬಂದಿರುವದರಿಂದಲೂ ಸ್ವಲ್ಪ ಕೈಕಾಯಬೇಕಾಗಿದೆ ಹರಿಯೇ ನಿನಗೆ ಆ ಬೂದಿಬಡಕನ ಹೆದರಿಕೆ ಇದ್ದರೂ ಇರಬಹುದು; ಆದರೆ ಅದು ನನಗೆ ಸ್ವಲ್ಪವೂ ಇಲ್ಲ, ಕಂಡೆಯಾ? ಎಲಾ, ಅವನು ನನ್ನನ್ನು ಜಯಿಸುವದೊತ್ತಟ್ಟಗಿರಲಿ, ನನ್ನ ಸರಿಗಟ್ಟುವವರಾರಾದರೂ ಈ ಜಗತ್ತಿನಲ್ಲಿದ್ದರೆ ಹೇಳಬಾರದೆ? ಎಂದು ಗರ್ಜಿಸಿ ನುಡಿಯಲು, ಹರಿಯು ಮುಗುಳು ನಗೆ ಬಂದ:-'ಮಲ್ಲಾಸುರನೇ, ನಿನ್ನನ್ನು ಇನ್ನುಮೇಲೆ ಜಯಸುವದಿರಲಿ; ಈವೊದಲೇ ಜಯಿಸಿ, ಅಂಕಿತನನ್ನಾಗಿ ಮಾಡಿಕೊಂಡಿರುವವರು ಇದ್ದಾರೆ. ಅದಕ್ಕೇನೆನ್ನುವಿ?''

ಮಲ್ಲ:-(ಆಶ್ಚರ್ಯದಿಂದ) ನಾನು ಎರಡನೆಯವರಿಗೆ ಅಧೀನನೆ? ನನ್ನನ್ನು ಅಂಕಿತದಲ್ಲಿಟ್ಟುಕೊಂಡಿರುವರೆ? ನನಗೇ ಗೊತ್ತಿಲ್ಲದ ಆ ನನ್ನ ವೈರಿಗಳು ನಿನಗೆ ಗೊತ್ತಿರುವರೆ?

ಹರಿ:-ಗೊತ್ತಿರುವರು. ಅವರಾರೆಂದರೆ ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರರೆಂಬುವರು.

ಮಲ್ಲಾ:—ಸಾಕು-ಸಾಕು, ನಿನ್ನ ಪಂಚಾಂಗವನ್ನು ಕಟ್ಟು. ನಾನು ಈ ಅರಿಷಡ್ವರ್ಗದವರ ವಶನಾಗಿರುವೆನೆಂದಷ್ಟೇ ನೀನು ಹೇಳುವದು. ಇದ್ದದ್ದ

ನ್ನೆಲ್ಲ ದಾನಮಾಡಿ, ಸತಿಸುತರನ್ನು ತ್ಯಜಿಸಿ, ನಿಮ್ಮಂಥ ಕಪಟ ಗುರುಗಳ ಸೇವೆ ಮಾಡಿ, ಹೊಟ್ಟೆಬಟ್ಟೆಗಿಲ್ಲದೆ ಅಲೆದಾಡಿ ಸಾಯಬೇಕೆನ್ನುವದೇ ನಿನ್ನ ಉದ್ದೇಶ ವಲ್ಲವೇ? ಹೇಗಾದರೂ ಆ ಮಾರ್ತಾಂಡಭೈರವನಿಗೆ ಜಯವನ್ನು ದೊರಕಿಸಿ ಕೊಡಬೇಕೆಂಬದೇ ನಿನ್ನ ತಂತ್ರವಲ್ಲವೇ? ನನ್ನ ತಮ್ಮನನ್ನು ಕೊಂದವನನ್ನು ಕೊಂದು ಅವನ ರಕ್ತವನ್ನು ಗಟಗಟನೆ ಕುಡಿಯುವವರೆಗೆ ನನ್ನ ಮನಸ್ಸಿಗೆ ಶಾಂತಿ ದೊರಕುವದೇ? ಎಲಾ, ಎರಡನೆಯವರಿಗೆ ಉಪದೇಶಮಾಡುವ ನೀನು ಸ್ವತಃ ಅರಿಷಡ್ವರ್ಗವನ್ನು ಜಯಿಸಿರುವೆಯಾ? ಮೋಹಿನಿಯಾಗಿ ಅಮೃತವನ್ನು ಹಂಚುವಾಗ, ದೈತ್ಯರ ವಿಷಯದಲ್ಲಿ ನಿನಗೆ ಮತ್ಸರವಿದ್ದಿಲ್ಲವಲ್ಲವೆ? ನರಸಿಂಹ ನಾಗಿ ನಮ್ಮ ಹಿರಣ್ಯಕಶ್ಯಪುವಿನ ಕರಳು ಬಗೆದಾಗ ನೀನು ಕೇವಲ ಶಾಂತ ಮೂರ್ತಿಯಾಗಿದ್ದೆಯಾ? ವಾಮನನಾಗಿ ನಮ್ಮ ಬಲಿಯನ್ನು ವಂಚಿಸಿದಾಗ ನಿನಗೆ ಲೋಭವಿರಲಿಲ್ಲವೇ? ಪರಶುರಾಮನಾಗಿ ಕ್ಷತ್ರಿಯ ಕುಲವನ್ನೇ ಸಂಹರಿಸಿದಾಗ ಪರಾಕ್ರಮದ ಅಹಂಕಾರವು ನಿನ್ನಲ್ಲಿದ್ದಿಲ್ಲವೇ? ರಾಮನಾಗಿ ಸೀತೆಯನ್ನು ಕಳ ಕೊಂಡು ವನದಲ್ಲಿ "ಹೇ ಸೀತೆ-ಹೇ ಸೀತೆ!" ಎಂದು ಅಡವಿಯ ಮರಗಳನ್ನೆಲ್ಲ ತೆಕ್ಕೆಹಾಯುವಾಗ ನಿನಗೇನು ಮೋಹವಿತ್ತೇ? ಕೃಷ್ಣನಾಗಿ ಗೋಪಿಕಾಸ್ತ್ರೀಯ ರನ್ನು ಸಂಸಾರಗೇಡು ಮಾಡುವಾಗ ನಿನಗೆ ಕಾಮಸಂಪರ್ಕವಿತ್ತೇ? "ತನ್ನ ಎಡೆಯಲ್ಲಿ ಕತ್ತೆಯು ಸತ್ತುಬಿದ್ದಿರುವಾಗ ಎರಡನೆಯವರ ಎಡೆಯಲ್ಲಿಯ ನೊಣ ಗಳನ್ನು ಜಾಡಿಸಲಿಕ್ಕೆ ಹೋದವರಂತೆ" ಇದನ್ನೇನು ಹೇಳುವೆ? ಇಂಥ ಬ್ರಹ್ಮ ಜ್ಞಾನಿಯಾದ ನಿನಗೆ ಸಮುದ್ರಮಂಥನ ಕಾಲದಲ್ಲಿ ಹುಟ್ಟಿದ ಲಕ್ಷ್ಮಿಯೂ, ಕೌಸ್ತುಭ ರತ್ನವೂ ಏಕೆ ಬೇಕಾದವು? ಅಕ್ಕಿಯನ್ನು ತೊಳೆಯದೆ ಕೇಸಕ್ಕಿಯನ್ನೇ ಕಿಲಬುಗಟ್ಟಿದ ಪಾತ್ರೆಯಲ್ಲಿ ತಿಂಬುವ ಕೃಪಣಚೂಡಾಮಣಿಯಾದ ನಿನ್ನಿಂದ ವೈರಾಗ್ಯದ ಉಪದೇಶವೇ? "ಒಳಗೆ ಥಾರ, ಮೇಲೆ ಮಣೆ; ಹೆರರ ಗಂಟಿಗೆ ನಾನೇ ಧಣಿ" ಎಂಬ ಮಹಾಮಂತ್ರದಿಂದ ಜಪಮಾಲೆಯ ಮಣಿಗಳನ್ನು ಎಣಿಸು ವವನೇ, ಹರಿದಾಸರ ಹಾಗೆ ಹೀಗೇಕೆ ಹೊತ್ತು ಬಂದಂತೆ ಕೊಡೆ ಹಿಡಿಯುವೆ?

ಹರಿ:—ಪಾಪ! ಹರಿದಾಸರು ಅಂಥ ಉಪದೇಶವನ್ನೇನು ಮಾಡುವರು?

ಮಲ್ಲಾ:-ಯಾಕೆ, ಮಾಡುವದಿಲ್ಲವೆ? ಒಂದು ಕಥೆಯಲ್ಲಿ ಭಕ್ತಿಮಾರ್ಗವೇ ಶ್ರೇಷ್ಠವೆಂದೂ, ಇನ್ನೊಂದರಲ್ಲಿ ಕರ್ಮಮಾರ್ಗವೂ, ಮತ್ತೊಂದರಲ್ಲಿ ಜ್ಞಾನ ಮಾರ್ಗವೂ, ಮಗದೊಂದರಲ್ಲಿ ಸತ್ಸಂಗತಿಯೂ; ಒಂದು ಕಥೆಯಲ್ಲಿ ಹರಿಸರ್ವೋ ತ್ತಮನೆಂದೂ, ಮತ್ತೊಮ್ಮೆ ಶಿವಸರ್ವೋತ್ತಮನೆಂದೂ, ಇನ್ನೊಮ್ಮೆ ಗುರು

ಸರ್ವೋತ್ತಮನೆಂದೂ ಪ್ರತಿಪಾದಿಸುವದಿಲ್ಲವೆ? ಹರಿಯೇ ನೀನು ಹರಿಯಲ್ಲ; ಹರಿದಾಸನು.

ಹರಿ:—(ನಗುತ್ತ) ಛೀ! ಛೀ! ನಾನು ಹರಿಯೂ ಅಲ್ಲ, ಹರಿದಾಸನೂ ಅಲ್ಲ. ಹರಿದಾಸರ ದಾಸರ ದಾಸನು. ನಿಜವಾದ ಹರಿದಾಸರು ಪರಮಾತ್ಮನ ಅನಂತರೂಪಕತ್ವವನ್ನು ಬಲ್ಲವರಿರುವದರಿಂದ, ಅವರು ಯಾವದೇ ರೂಪಕ್ಕೆ ಸರ್ವೋತ್ತಮತ್ವವನ್ನು ಕಥಾಸಂದರ್ಭಾನುಸಾರವಾಗಿ ಕಲ್ಪಿಸಿ ಹೇಳಿದರೂ ಅವರಿಗೆ ಎಳ್ಳಷ್ಟೂ ದೋಷಬರುವದಿಲ್ಲ. ಅದಿರಲಿ. ಮಲ್ಲಾಸುರಾ, ನಾನು ಈಗ ಈ ಬಗ್ಗೆ ನಿನ್ನ ಕೂಡ ವಾದಮಾಡುವದಕ್ಕೆ ಇಲ್ಲಿಗೆ ಬಂದಿಲ್ಲ; ಮತ್ತು ಇದನ್ನು ಚರ್ಚಿಸತಕ್ಕ ಸಮಯವೂ ಇದಲ್ಲ. ಆದ್ದರಿಂದ ಆ ಪರಶಿವನಿಗೆ ನಿನ್ನ ಉತ್ತರವನ್ನೇನು ಹೇಳಲಿ? ಅದನ್ನಷ್ಟು ಹೇಳಿಬಿಡು, ಹೊರಡುವೆನು.

ಮಲ್ಲಾ:—ನೀನು ಮಾಡಿದ ಉಪದೇಶವನ್ನೇ ಆ ಶಿವನು ಮಾಡಿದ್ದರೆ ಒಂದುವೇಳೆ ಶೋಭಿಸುತ್ತಿತ್ತು; ಯಾಕಂದರೆ ಅವನು ಹೇಳಿಕೇಳಿ ಆಶಾರಹಿತನು. ಕಾಮನನ್ನು ಸುಟ್ಟವನು. ತನ್ನ ಬಡತನದ ಬಾಳ್ವೆಗೆ ಬೇಸತ್ತು ಕಾಲಕೂಟವನ್ನು ಸಹ ಕುಡಿದವನು ಅದಿರಲಿ ಹರೀ, ಕಾಲಕೂಟಕ್ಕೂ ಸಾಧ್ಯವಾಗದ ಕೆಲಸವನ್ನು ನನ್ನ ಬಾಣಗಳು ಮಾಡುವವೆಂದೂ, ಪರಸ್ಪರ ಹೃದಯದ ನಿಜ ಇಂಗಿತವನ್ನು ಯುದ್ಧರಂಗದಲ್ಲಿ ಹೃದಯವನ್ನು ಭೇದಿಸಿ ತಿಳಕೊಳ್ಳುವದೆಂದೂ ಅವನಿಗೆ ಹೇಳು.

ಹರಿ:—ಹಾಗೆಯೇ ಆಗಲಿ ನಿನ್ನ ಪ್ರಾರಬ್ಧಕರ್ಮಕ್ಕೆ ಯಾರೇನು ಮಾಡುವರು? ಎಂದಂದು ಅಲ್ಲಿಂದ ಹೊರಟು ಬಂದನು.

ಮಹಾವಿಷ್ಣುವು ಹೋದನಂತರ, ತಮ್ಮನ ಮರಣದಿಂದ ಸಿಟ್ಟಿಗೆದ್ದ ದೈತ್ಯರಾಜನು ಸಕಲ ಶಸ್ತ್ರಾಸ್ತ್ರಗಳಿಂದಲೂ, ರಾಕ್ಷಸೀ ಮಾಯೆಗಳಿಂದಲೂ ಯುಕ್ತನಾಗಿ, ತನ್ನ ಸಹಸ್ರಾಕ್ಷವೆಂಬ ರಥವನ್ನು ಏರಿ ಆ ಮಾರ್ತಾಂಡಭೈರವನೊಡನೆ ಯುದ್ಧಕ್ಕೆಬರಲು, ಲೋಕಗಳೆಲ್ಲವೂ ನಡುಗಹತ್ತಿದವು. ಸಮರದಲ್ಲಿ ಆ ಕಲ್ಪಾಂತರುದ್ರನನ್ನು ಜಯಸುವೆನೆಂಬ ಉತ್ಸಾಹದಿಂದ ಆ ರಾಕ್ಷಸನ ದೇಹವು ಉಬ್ಬಿಹೋಗಿತ್ತು.

ಹೀಗೆ ಪ್ರಚಂಡ ಬಲಯುತನಾಗಿ ದೈತ್ಯರಾಜನಾದ ಮಲ್ಲಾಸುರನು ಬಂದದ್ದನ್ನು ನೋಡಿ, ಘೃತಮಾರಿಯು ಯುದ್ಧಸನ್ನದ್ಧಳಾಗಿ ರಾಕ್ಷಸಸೈನ್ಯವನ್ನು ನುಂಗಹತ್ತಿದಳು. ರಾಕ್ಷಸೀ ಮಾಯೆಗೆ ಆ ದೇವಿಯು ಬಗ್ಗಲಿಲ್ಲ. ಆಗ ಮಲ್ಲಾ

ಸುರನು ಆ ಘೃತಮಾರಿಗೆ ಆಕೆಯು ರೂಪವನ್ನನುಲಕ್ಷಿಸಿ ಅನೇಕವಿಧವಾಗಿ ನಿಂದಿಸಲು, ದೇವಿಯು ದಿವ್ಯರೂಪವನ್ನು ಧರಿಸಿ, ಸಿಟ್ಟಿನಿಂದ ಆ ದೈತ್ಯನ ಬಾಹುವನ್ನು ತನ್ನ ಖಡ್ಗದಿಂದ ತುಂಡರಿಸಿದಳು. ಆ ಬಾಹುವು ನೆಲಕ್ಕೆ ಬೀಳಲು, ರಕ್ತಹರಿದು, ಆ ಸ್ಥಳವು ಶೋಣತೀರ್ಥವೆಂದು ಪ್ರಸಿದ್ಧಿಯನ್ನು ಹೊಂದಿತು. ಆ ದೈತ್ಯನಿಗೆ ಮೊದಲಿನ ಸ್ಥಳದಲ್ಲಿಯೇ ಬೇರೊಂದು ಬಾಹುವು ಮೊದಲಿನಂತೆಯೇ ಕಟಕ-ಕೇಯೂರಾದಿಗಳಿಂದ ಯುಕ್ತವಾಗಿ ಉತ್ಪನ್ನವಾಯಿತು. ಆಗ್ಗೆ ದೈತ್ಯನು ಅನೇಕ ಬಾಣಗಳನ್ನು ಏಕಕಾಲಕ್ಕೆ ವರ್ಷಿಸಿ, ಘೃತಮಾರಿಯು ಶರೀರವನ್ನೆಲ್ಲ ವಿದಾರಣ ಮಾಡಲು, ದೇವಿಯು ವಿಹ್ವಲಳಾಗಲು, ಶ್ರೀಮನ್ಮಾರ್ತಾಂಡಭೈರವನು ಸ್ವತಃ ಯುದ್ಧಕ್ಕೆ ಸಾಗಿ ಬಂದನು. ಆಗ ಮಲ್ಲಾಸುರನು:- ಎಲೈ ಶಿವನೇ, ನನ್ನ ಸಂಗಡ ಯುದ್ಧಮಾಡಲು, ನೀನು ಸರ್ವಥಾ ಯೋಗ್ಯನಲ್ಲ. "ವಿವಾದಶ್ಚ ವಿವಾಹಶ್ಚ ಸಮಯೋರೇವಶೋಭತೆ" ಎಂಬಂತೆ ನಿನ್ನ ಸಮಾನ ಸ್ಕಂಧರೊಡನೆ ಯುದ್ಧಮಾಡುವದು ನಿನಗೆ ಉಚಿತವು. ನೀನು ಸರ್ವಥಾ ನನಗೆ ಸರಿ ಬರಲಾರೆ.

ರಾಗ—ಕಾಂಬೋಧಿ ತಾಳ—ಝಂಪೆ

ಸರಿಯೆ ನೀ ನನಗೆ ಪುರಹರ ನೋಡೆಲೊ ‖ ಧುರದೊಳಿದು ರಾಗಸುವ ಬಿಡಬೇಡಲೋ ‖ ಪಲ್ಲ ‖ ಏಕಾತ್ಮ ನೀನು ವಿಪುಲಾನೀಕಯುತ ನಾನು | ಲೋಕೈಕಮುದಿವೃಷಭಯುತನು ನೀನು ‖ ಸಾಕಾರಗಿರಿಯಂದದಾನೇಕದಂತಿಗಳ | ಸಾಕಿ ಯುದ್ಧಕೆ ಬಿಡದೆ ನೂಕುವನು ನಾನು ‖ ೧ ‖ ಪೊತ್ತಿರುವೆ ನಾ ದಿವ್ಯ ವಸ್ತ್ರಗಳ ಮತ್ತೆ ನೀ | ಸತ್ತಗಜಕೃತ್ತಿಯಪೊತ್ತಿರುವೆಯೊ ‖ ಮುತ್ತುರತ್ನಂಗಳಾಭರಣವೆನಗಿಹವೈಯ್ಯ | ಹುತ್ತದೊಳಗಣ ಸರ್ಪಭೂಷಣನು ನೀನು ‖ ೨ ‖ ಮಿಸುನಿಮಿಶ್ರಿತ ಹಸನ ಗಂಧಲೇಪನವೆನಗೆ | ಮಸಣದಭಸಿತಲೇಪನವೊ ನಿನಗೆ ‖ ಶಶಿಮೊಗದ ಸತಿಯರಾನೇಕ ಸಾಸಿರರೆನಗೆ | ಶಶಿಧರನೆ ನಿನಗೊರ್ವಳೇ ಜರಠಸತಿಯು ‖ ೩ ‖ ಸೇರುರಿಪತಂಗ ತಾನೆರಗಿ ಯಾರಿಸಲಹುದೆ? | ನೀರಡಿಸೆಸಾಗರವ ನೊಣಕುಡಿಯಬಹುದೆ? | ಮೇರುಗಿರಿಯನು ಇಲಿಯು ಪಾರು ಕೊರೆಯಲ್ಬಹುದೆ? | ತಾರೆಗಳು ತಾನುನರನೆಣಿಸಲಹುದೆ? ‖ ೪ ‖

ಮಲ್ಲಾಸುರನ ಈ ಸೊಕ್ಕಿನ ಮಾತುಗಳನ್ನು ಕೇಳಿ, ಶಂಭುವಿಗೆ ಕೋಪ ಬರಲು, ಆತನು ತೀಕ್ಷ್ಣ ಧಾರೆಯುಳ್ಳ ತನ್ನ ಖಡ್ಗದಿಂದ ದೈತ್ಯನ ಭುಜದ ಮೇಲೆ ಹೊಡೆದು ಜಗತ್ತೇ ನಡಗುವಂತೆ ತನ್ನ ಡಮರುವನ್ನು ಬಾರಿಸಿದನು. ಮಲ್ಲಾಸುರನು

ಸಹ ಭಯಂಕರವಾಗಿ ಸಿಂಹನಾದವನ್ನು ಮಾಡಿ, ಅತ್ಯದ್ಭುತವಾದ ಗಜರೂಪವನ್ನು ತಾಳಿ ಏರಿಬರಲು, ಶಂಭುವು ಖಟ್ವಾಂಗದಿಂದ ದೈತ್ಯನನ್ನು ಹೊಡೆದನು. ಮಲ್ಲನು ಅದನ್ನು ತನಗೆ ತಗಲುಗೊಡದೆ:-"ಎಲೈ ಶಿವನೇ, ಇದೇ ಏನು ನಿನ್ನ ಬಲವು?" ಎಂದು ಉಪಹಾಸ ಮಾಡಲು, ಪರಶಿವನು ಕೋಪಿಸಿಗೊಂಡು ಆ ದೈತ್ಯನ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದರ ಪ್ರಭಾವದಿಂದ ಮಲ್ಲನ ಸೈನಿಕರ ಶಸ್ತ್ರಾಸ್ತ್ರಗಳೂ, ಲೋಹ ಕವಚಗಳೂ ಕಾದು ಕೆಂಪಗಾಗಲು ಅವುಗಳನ್ನು ಚಲ್ಲಿಕೊಟ್ಟು ಅವರು ಓಡಹತ್ತಿದರು. ಮಲ್ಲಾಸುರನ ಮೈಮೇಲೆಲ್ಲ ಗುಳ್ಳೆಗಳೆದ್ದವು. ಆಗ ರಾಕ್ಷಸನು ವರುಣಾಸ್ತ್ರವನ್ನು ಪ್ರಯೋಗಿಸಲು ಅಗ್ನಿಯು ಶಾಂತವಾಗಿ, ರಣಭೂಮಿಯು ಜಲಮಯವಾಯಿತು. ದೇವಸೈನ್ಯವೆಲ್ಲ ನೀರಲ್ಲಿ ಮುಳುಗುವದನ್ನು ಕಂಡು, ಶಂಭುವು ಮಾರುತಾಸ್ತ್ರದಿಂದ ಜಲವನ್ನು ಶೋಷಿಸಿದನು. ದೈತ್ಯನು ಅದಕ್ಕೆ ಪ್ರತೀಕಾರವಾಗಿ ಸರ್ಪಾಸ್ತ್ರವನ್ನು ಪ್ರಯೋಗಿಸಲು, ಶಿವನು ಗರುಡಾಸ್ತ್ರವನ್ನು ಪ್ರಯೋಗಿಸಿದನು. ನಂತರ ಆ ಮಣಿಮರ್ದನನು ಸಕಲಸಂಹಾರಕವಾದ ಪಾಶುಪತಾಸ್ತ್ರವನ್ನು ಪ್ರಯೋಗಿಸಲು, ಅದು ಆ ದೈತ್ಯನ ಪ್ರತ್ಯಸ್ತ್ರಗಳೆಲ್ಲವನ್ನೂ ನುಂಗಿ ಅವನ ಮೇಲೆ ಬಿದ್ದಿತು. ಶಂಕರನು ಅಷ್ಟರಲ್ಲಿ ತನ್ನ ತ್ರಿಶೂಲದಿಂದಲೂ ಜಡಿದನು. ಆಗ ದೈತ್ಯನು ತನ್ನ ಕಣ್ಣುಗಳನ್ನು ತಿರುಗಿಸುತ್ತ ನೆಲಕ್ಕೆ ಬಿದ್ದನು. ಆಗ ಮಾರ್ತಂಡಭೈರವನು:-"ದುರುಳ ರಕ್ಕಸನೇ, ಎಷ್ಟು ಹೇಳಿದರೂ ಕೇಳದೆ ನನ್ನ ಸಂಗಡ ಯುದ್ಧಮಾಡಿದಿಯಾ?" ಎಂದು ಆ ಮಲ್ಲಾಸುರನ ಶಿರವನ್ನು ತನ್ನ ಪಾದದಿಂದ ಮೆಟ್ಟಿದನು. ಚಿಂತಾಮಣಿಯ ಸ್ಪರ್ಶ ಮಾತ್ರದಿಂದ ಲೋಹಕ್ಕೆ ಸುವರ್ಣತ್ವವು ಬರುವಂತೆ, ಮಲ್ಲಾಸುರನಿಗೆ ಜ್ಞಾನಾಂಕುರವಾಗಿ, ಅವನು ತಾನಾಗಿಯೇ ಆ ಜಗದುದ್ಧಾರಕನ ಪಾದವನ್ನು ತನ್ನ ತಲೆಯ ಮೇಲಿರಿಸಿಕೊಂಡು, ಗದ್ಗದ ಕಂಠದಿಂದ ಆ ಮಹೇಶನನ್ನು ಸ್ತುತಿಸಹತ್ತಿದನು:-

ರಾಗ:-ನಾದನಾಮಕ್ರಿಯೆ.

ಪಾಪಿ ನಾ ಪಾಪಾತ್ಮ ಪಾಪಸಂಭವ ನಿರುತ |
ಪಾಪಕರ್ಮನು ಪಾಪಮಯ ಪಾಪರೂಪ ಕೃ |
ಪಾಪಯೋನಿಧಿದೇವ ಚಿದ್ರೂಪ ನೀರೂಪ ಹರಿಹರ ವಿರಂಚಿರೂಪ ||
ಪಾಪಮತಿ ಪಂಕಾಬ್ಧಿಮಗ್ನ ನೆನ್ನೊಳ್ ಬುದ್ಧಿ |
ರೂಪ ಹರ್ಷ ಕ್ರೋಧ ಮೋಹ ಶಕ್ತಿ ಕ್ರಿಯಾ |
ರೂಪಮದರ್ಪಾಮರ್ಷವಿದ್ಯಾಭಕ್ತ್ಯಹಂಭಾವ ಕಾಮ ಧರ್ಮಾತ್ಮನಿಪ್ರಾ ||೧||

ರಾಗ:-ಧನ್ಯಾಸಿ.

ರೂಪ ಶಮದಮ ದಂಭ ಭವ್ಯ ಸೂಕ್ಷ್ಮ ಸ್ಥೂಲ |
ರೂಪಮೃತ್ಯು ಜ್ಞಾನ ಲೋಭ ಭ್ರಮಕಾರುಣ್ಯ |
ರೂಪ ಕ್ಷುಧಾ ಶಾಂತಿ ವೀರರಸ ಮಾತ್ಸರ್ಯ ಭಕ್ತವಾತ್ಸಲ್ಯರೂಪ ||
ಈ ಪರಿಯ ಪರಿಪರಿಯ ರೂಪದೊಳ್ನಿಲೆಸಿ ವಿ |
ರೂಪಾಕ್ಷ ಲೋಕೇಶ ಭೈರವನೆ ಕೃತಿಗೈವೆ |
ಕಾಪಟ್ಯವಿಲ್ಲದುದ್ಧರಿಸದೇಕೈ ಶುಭಾಶುಭಕರ್ಮ ಸೂತ್ರಧಾರ || ೨ ||

ರಾಗ:-ಶಂಕರಾಭರಣ.

ವಿಧಿಯಾಗಿ ಜಗಸೃಜಿಸಿ ವಿಧಿತಾತನಾಗಿ ವಿಧ |
ವಿಧದಿ ಪೋಷಿಸುತ ವಿಧಿಮುಡಿಗಡಕನಾಗಿ ನೀ |
ಮುದದಿಯೊಳಗಿರ್ದು ವಿಧವಿಧದಿ ಕೃತಿಗೈಸುತಲೆ ತುದಿಗೆ ವಧಿಸುವಿಯಲ್ಲದೆ||
ಅಥವ ಜೀವಿಗಳಸ್ವತಂತ್ರರಲ್ಲವೆ? ತ್ರಿಪುರ |
ಭೇದಿ ಸುರ-ದನುಜರೆಂಬುವ ಭೇದವೇಕಯ್ಯ |
ನೀ ದಯದಿನೋಡಿಪೊರೆಶರಣಜನಕರುಣಾಪಯೋನಿಧಿಯೆಭೇದವಿಡದೆ||೩||

ರಾಗ: ಮೋಹನ.

ವಿಶ್ವಾಂತರಾತ್ಮ ವಿಶ್ವಾಧ್ಯಕ್ಷ ವಿಶ್ವೇಶ |
ವಿಶ್ವಪ್ರೇರಕ ವಿಶ್ವಮಯ ವಿಶ್ವಚೈತನ್ಯ |
ವಿಶ್ವವಿಸ್ಮಯ ವಿಶ್ವತತ್ವೇಂದ್ರ ವಿಶ್ವಕರ ವಿಶ್ವಗುರು ವಿಶ್ವಸಾಕ್ಷಿ ||
ವಿಶ್ವಶಕ್ಷು ಕ್ಷ್ನ ವಿಶ್ವಾತೀತ ವಿಶ್ವಕರ |
ವಿಶ್ವೈಕಕಾರಣ ವಿಶಿಷ್ಟ ವಿಶ್ವೋದ್ಧಾರ |
ವಿಶ್ವತೋಮುಖ ವಿಶ್ವಸಂಜೀವ ವಿಶ್ವಧರ ವಿಶ್ವಕಾರ್ಯಪ್ರಕೂರ್ಯ ||೪||

ರಾಗ:-ನಾಯಕಿ.

ಪುರನಾಶ ಪರಮೇಶ ಭರಿತಾಶ ಚಿರಕಾಶ |
ಶರಣಚಯ ಮರಣಭಯ ಹರಣ ಜಯ ಕರುಣಮಯ |
ನಿರುತಘನದುರಿತವನ ಪರಶುನಿಭ ಪರಮಶುಭಕರನಾಮ ಕರುಣಧಾಮ||
ಪುರುಹೂತ ಹವಿಧಾತ ಶರಜಾತ ಗುರುಶೀತ |
ಕರಧಾರಿ ಮುರವೈರಿ ತರುಣಹರ ಹರಿಣಕರ |
ಗಿರಿಜೇಶ ಶಿವನಾಶ ಗರಳಾಶ ಭವಪಾಶ ಹರಣವರ ಕರುಣಚರಣ ||೫||

ರಾಗ:-ಕೇದಾರಗೌಳ.

ನಿರವದ್ಯ ನಿಸ್ಸಂಗ ನಿರ್ಗುಣ ನಿರಾವರಣ |
ನೀರಾಗ ನಿರ್ಮದ ನಿರಾಧಾರ ನಿಷ್ಕಾಮ |
ನಿರುಪಮ ನಿರಾತಂಕ ನಿರ್ಭೇದ್ಯ ನಿರ್ಲೇಪ ನಿಷ್ಕರ್ಮ ನಿಷ್ಪ್ರಪಂಚ ||
ನಿರವಧಿಕ ನಿರ್ಮಲರಣ ನಿರ್ಭಯ ನಿರಾಲಂಬ |
ನಿರಘ ನಿರ್ಮೋಹ ನಿರ್ದ್ವಂದ್ವ ನಿರಹಂಕಾರ |
ನೀರೂಪ ನಿಶ್ಚಲ ನಿರಾನಂದ ನಿಶ್ಚಿಂತ ನಿರ್ಲೋಭಿ ನಿರ್ವಿಕಾರ ||೬||

ರಾಗ:—ನಿತ್ಯಕಲ್ಯಾಣಿ.

ಭಕ್ತಿರತ್ನಾಕರಂ ಭಕ್ತಶೋಭಾಕರಂ |
ಭಕ್ತವಿಶ್ವಾಸಕೋಶದ್ವಾರರಕ್ಷಕಂ |
ಭಕ್ತವಿಶ್ವಾಸ ಪಾಶಪ್ರಬದ್ಧಂ ಭಕ್ತವಿಶ್ವಾಸ ಸುಪ್ರಸಿದ್ಧಂ ||
ಭಕ್ತಮಣಿ ಭೂಷಣಂ ಭಕ್ತಗಣ ತೋಷಣಂ |
ಭಕ್ತಾನುಕಂಪಿ ಭಕ್ತಿಯಸಿರಿಯ ಸೊಂಪಿಗಂ |
ಭಕ್ತವಿಶ್ವಾಸ ಪ್ರವರ್ತಕಂ ಭಕ್ತವಿಶ್ವಾಸ ಭಾವಪ್ರಭೂತಂ ||೭||

ರಾಗ:—ಭೈರವಿ.

ಭಕ್ತಲೋಲಂ ಸದಾ ಭಕ್ತಿಯುಕಳಾಸ್ಥಳಂ |
ಭಕ್ತರಕ್ಷಕ ತ್ರಿವಿಧ ಭಕ್ತಪರಿಪಾಲಕಂ |
ಭಕ್ತವಿಶ್ವಾಸಾಮೃತಸ್ವಾದನೋತ್ಸುಕಂ ಭಕ್ತಹೃತ್ಪದ್ಮವಾಸಂ ||
ಭಕ್ತವಿಶ್ವಾಸ ಲೀಲಾನುಕೂಲಂ ನಿತ್ಯ |
ಭಕ್ತವಿಶ್ವಾಸ ವಿಪುಳಾಂತಃಪುರಾಶ್ರಿತಂ ||
ಭಕ್ತಾಭಿಮಾನಿ ಭಕ್ತೋದ್ಧಾರ ನಿಜಭಕ್ತ ಭುಕ್ತಿಮುಕ್ತಿಪ್ರದಾತ ||೮||

ರಾಗ:—ಸಾವೇರಿ.

ಕರುಣಾಳು ಕರುಣಾಲವಾಲ ಕರುಣಾರಾಮ |
ಕರುಣಾನಿವೇದ ಕರುಣಾಸುರಭಿ ಕರುಣಗುಣ |
ಕರುಣಾಂಚಿತಾ ಖಂಡಪಿಂಡ ಕರುಣಾನರ್ಘ ರತ್ನಮಂಡಿತ ಕರಂಡ ||
ಕರುಣಾನಿದಾನ ಕರುಣಾಲೋಲ ಕರುಣಮಯ |
ಕರುಣಾಕಟಾಕ್ಷ ಕರುಣಾಮೃತಾರ್ಣವ ಶರಣ |
ಕರುಣಾನುಸಂಧಾನ ಗುರುದತ್ತ ಮಾರ್ತಂಡಭೈರವನೆ ಕರುಣಾಕರ ||೯||

ಹೀಗೆ ಪರಿಪರಿಯಿಂದ ಸ್ತೋತ್ರಮಾಡಿ, ಮಲ್ಲಾಸುರನು ಸುಮ್ಮ ನಾಗಲು, ಭಕ್ತಲೋಲನಾದ ಮಹೇಶ್ವರನು:-"ಎಲೈ ಭಕ್ತಮಲ್ಲನಾದ ಮಲ್ಲಾ ಸುರನೇ, ನಿನ್ನ ಭಕ್ತಿಗೆ ಮೆಚ್ಚಿದೆನು. ಬೇಕಾದ ವರವನ್ನು ಬೇಡಿಕೋ" ಎನ್ನಲು, ಮಲ್ಲಾಸುರನು:-"ದೇವಾ, ನಿನ್ನನ್ನು ನಾನು ಏನು ಬೇಡಲಿ? ನನ್ನ ಪ್ರಬಲ ಪ್ರತಾಪದಿಂದ ದೇವತೆಗಳಿಗೂ ನಿಲುಕದ ಸುಖವನ್ನು ಇಂದಿನವರೆಗೆ ಅನುಭವಿಸಿ ದೆನು. ಅಂತ್ಯಕಾಲದಲ್ಲಿ ಸದಾಶಿವಕರನಾದ ನಿನ್ನ ದರುಶನವಾಗಿ ಕೃತಾರ್ಥ ನಾದೆನು. ನಿನ್ನ ಹಸ್ತದಿಂದಲೇ ಮರಣವೊದಗಿದ ಮೇಲೆ ನನಗೆ ಸ್ವರ್ಗಾದಿಗಳ ಚಿಂತೆಯಾಕೆ? ನನಗೆ ಯಾವ ಆಶೆಯೂ ಉಳಿದಿರುವದಿಲ್ಲ. ಆದರೂ ಎಲ್ಲರೂ ನನ್ನ ಹೆಸರನ್ನು ಮೊದಲು ಉಚ್ಚರಿಸಿ ನಿನ್ನನ್ನು (ಮಲ್ಲಾರಿ) ಕರೆಯಲಿ. ನನ್ನ ತಲೆಯು ಯಾವಾಗಲೂ ನಿನ್ನ ಪಾದದ ಕೆಳಗಿರಲಿ. ನಿನ್ನ ಪ್ರೇರಣೆಯಿಂದ ಮಾಡಿದ ಈ "ನವರತ್ನಮಾಲಾ" ಸ್ತೋತ್ರವನ್ನು ನಿನ್ನ ಚರಣಗೊಪ್ಪಿಸಿಕೊಂಡು ಅದನ್ನು ಯಾರು ಪಠಣಮಾಡುವರೋ ಅವರಿಗೆ ಸಕಲ ಇಷ್ಟಾರ್ಥವನ್ನು ಪೂರೈಸಿ ಕೊಡು." ಎಂದು ಬೇಡಿಕೊಳ್ಳಲು, ಶಂಭುವು "ತಥಾಸ್ತು" ಎಂದು ನುಡಿದು ಮಲ್ಲಾಸುರನಿಗೆ ಮೋಕ್ಷವನ್ನಿತ್ತನು.

ನಂತರ ಮಲ್ಲಾಸುರನ ಮಕ್ಕಳಾದ ಕುಂಭಶೂಲ, ಶೂಲಧರ, ಲೋಹಾ ರ್ಗಲ, ದೇವಗಂಧರ್ವ, ಮಹಾಬಾಹುವೆಂಬರು ಯುದ್ಧಕ್ಕೆ ಬರಲು, ದೇವನು ತನ್ನ ಭಕ್ತನ ಮಕ್ಕಳೆಂದು ಅವರನ್ನು ಉದಾಸೀನ ಮಾಡಿ ಬಿಟ್ಟನು; ಆದರೆ ಅವರು ಮದಾಂಧರಾಗಿ ಶಿವನನ್ನು ಮರೆತುದರಿಂದ "ಮೂರ್ಖರೇ, ಪರ್ವತ ಗಳಾಗಿರಿ" ಎಂದು ಶಪಿಸಲು, ಅವರು ಗುಡ್ಡಗಳಾಗಿ "ಐದು ತಲೆಗುಡ್ಡ"ವೆಂದು ಮೈಲಾರದ ಹತ್ತಿರ ಈಗಲೂ ಕಾಣುತ್ತಿರುವರು.

ಆ ಮೇಲೆ ಮಹೇಶನು ಧರ್ಮಸುತರಾದ ಋಷಿಗಳಿಗೆ ವರವನ್ನು ಕೇಳಿ ಕೊಳ್ಳುವಂತೆ ಹೇಳಲು, ಅವರು ಕಲಿದೋಷಪೀಡಿತರಾದ ಜನರ ಉದ್ಧಾರಾರ್ಥ ವಾಗಿ ಸ್ವಯಂಭೂಲಿಂಗವಾಗಿ ಉದಯಿಸಬೇಕೆಂದು ಬೇಡಿಕೊಳ್ಳಲು, ಭಕ್ತಾ ಧೀನನಾದ ಮಹೇಶನು, ಕಲ್ಪವೃಕ್ಷದ ಕೆಳಗೆ ಪಾರ್ವತೀಸಮೇತನಾಗಿ ಮಾರ್ಗ ಶೀರ್ಷ ಶುಕ್ಲ ಷಷ್ಠಿ (ಚಂಪಾಷಷ್ಠಿ) ರವಿವಾರ ಶತತಾರಾ ನಕ್ಷತ್ರದಲ್ಲಿ ಎರಡು ಸ್ವಯಂಭೂಲಿಂಗಗಳಾಗಿ ಕಾಣಿಸಿಕೊಂಡನು. ಭಕ್ತರ ಮೇಲಿನ ಪ್ರೇಮದಿಂದ ದೇವನು ಅಲ್ಲಿ ಕಾಣಿಸಿಕೊಂಡ ಕಾರಣ ಆ ಸ್ಥಳವು ಪ್ರೇಮಪುರವೆಂದು ಪ್ರಸಿದ್ಧ ವಾಯಿತು. ಎಲ್ಲ ಜಾತಿಯ ಭಕ್ತಜನರ ಧ್ಯಾನಕ್ಕೆ ಸಾಧ್ಯವಾಗಬೇಕೆಂದು ಋಷಿ

ಗಳು ಮಾರ್ತಾಂಡಭೈರವನೂ ಹತ್ತರದಲ್ಲೆ ಕುದುರೆಸಹಿತನಾದ ಮಣಿಕಾ ಸುರನೂ ನಿಂತಿರುವ ಮೃಣ್ಮಯಮೂರ್ತಿಯೊಂದನ್ನು ಅಲ್ಲಿ ನಿರ್ಮಿಸಿದರು.

ಆಗ ದೇವದೇವನಾದ ಮಲ್ಲಾರಿಯು ತನ್ನ ಭಕ್ತಜನರ ಉದ್ಧಾರಕ್ಕಾಗಿ ಪ್ರಸಾದವಾಕ್ಯವನ್ನು ನುಡಿದದ್ದೇನಂದರೆ:—

"ಪೂರ್ವಜನ್ಮದ ಸುಕೃತಫಲದಿಂದಲೇ ಜನರಿಗೆ ನನ್ನಲ್ಲಿ ಭಕ್ತಿಯುತ್ಪನ್ನ ವಾಗುವದೇ ಹೊರ್ತು ಎಲ್ಲರಿಗೂ ಉಂಟಾಗತಕ್ಕದ್ದಲ್ಲ. ನನ್ನ ಪ್ರತಿಮೆಯು ಪೂಜಿಸಲ್ಪಡುವ ಮನೆಯಲ್ಲಿ ಯಾವಾಗಲೂ ಸಕಲ ಸಂಪತ್ತುಗಳೂ ನೆಲೆಗೊಳ್ಳು ವವು. ನನ್ನ ಚರಿತ್ರೆಯನ್ನು ಪಾರಾಯಣ ಮಾಡುವವರ ಮನೆಯಲ್ಲಿ ಯಾವ ತರದ ಪೀಡೆಯೂ, ಪಿಶಾಚಿ-ಗ್ರಹಬಾಧೆಗಳೂ ಆಗುವದಿಲ್ಲ. ನನ್ನ ಚರಿತ್ರೆಯನ್ನು ಬೋಧಿಸುವವರನ್ನು ನಾನೇ ಎಂದು ಭಾವಿಸಿ, ಅವರನ್ನು ವಸ್ತ್ರಾದಿಗಳಿಂದ ಪೂಜಿಸಬೇಕು. ನನ್ನ ಚರಿತ್ರೆ ಪಠನೆಯನ್ನು ಮಾಡುವವರಿಗೆ ಸಕಲ ಯಜ್ಞ-ಯಾಗಾದಿಗಳ ಫಲವು ಲಭಿಸುವದು. ಅವರಿಗೆ ಸರ್ವದೇವತೆಗಳೂ ದಾಸಾನು ದಾಸರಾಗುವರು. ಸಾರಾಂಶ, ನನ್ನ ಭಕ್ತರ ಮೇಲೆ ನನಗಿರುವ ಪ್ರೇಮವು, ಪತ್ನಿಯಾದ ಪಾರ್ವತಿಯ ಮೇಲೂ, ಪುತ್ರರಾದ ಗುಹ-ಗಜಾನನರ ಮೇಲೂ ಇರುವದಿಲ್ಲ. ನನ್ನ ಭಕ್ತರೇ ಧನ್ಯರು! ಧನ್ಯರು!! ಧನ್ಯರು!!!

ಇನ್ನು ಪರಮೇಶ್ವರನನ್ನು ಅವತಾರ ಮಾಡಿಸಿ, ಜಗತ್ತನ್ನೇ ಉದ್ಧಾರ ಮಾಡಿಸಲಿಕ್ಕೆ ಆ ಮಣಿಮಲ್ಲಾಸುರರ ನಿಕಟ ತಾಮಸ (ವಿರೋಧ)ಭಕ್ತಿಯೂ, ಮಹಾತ್ಮರಾದ ಧರ್ಮಪುತ್ರರ ಸಾತ್ವಿಕ ಭಕ್ತಿಯೂ ಕಾರಣವಾದವು. ಅದರಿಂದ ಅದೇ ಪ್ರಕಾರದ ನಿಕಟಭಕ್ತಿಯನ್ನು ಪರಮೇಶ್ವರನ ಚರಣಾರವಿಂದದಲ್ಲಿಟ್ಟು ಉದ್ಧಾರವಾಗಬೇಕೆಂಬ ಉದ್ದೇಶದಿಂದಲೇ ಕೀರ್ತನಾರಂಭದಲ್ಲಿ ಜ್ಞಾನಿಗಳು ಮನಸ್ಸನ್ನು ಕುರಿತು ಉಪದೇಶ ಮಾಡಿರುವದೇನಂದರೆ:-

"ಭಾವವೆಕೇಳ್ಮನ | ಮುಕುತಿ ಜೇವಾಳ."

ಜಯ ಪುಂಡರೀಕ ವರದ ಹರಿ ವಿಠ್ಠಲ! ಸೀತಾಕಾಂತ ಸ್ಮರಣ

ಜಯ ಜಯ ರಾಮ!! ನಮಃ ಪಾರ್ವತೀಪತಯೇ ಹರ

ಹರ ಮಹಾದೇವ! ಜಯಗುರುದೇವ! ದತ್ತ!!!

ಏಳ್ಕೊಟಿ, ಏಳ್ಕೊಟಿ, ಸಾಂಗಬಲೋ!

---

ಸಂಪೂರ್ಣವಾದುದು.

# ಆರತೀ ಪದ.

ರಾಗ—ಸುರಟಿ. ತಾಳ—ಝಂಪೆ.

ಮಂಗಲಂ ಮ್ಹಾಲಸಾ | ಗಂಗೆಯುರ ನಾಥನಿಗೆ | ಲಿಂಗಧವಳಾಂಗ ವರ ಡಮರುಧರಗೇ ‖ ಮಂಗಳಂ ರಂಗಸಖ | ಸಂಗಮೇಶ್ವರನಿಗೆ | ಮಂಗಳಂ ಅಂಗಜನ ಭಂಗಿಸಿದಗೇ ‖ ಪ ‖

ಚಂಡವಿಕ್ರಮ ಮಲ್ಲ | ಪುಂಡಮಣಿ ರಕ್ಕಸರು | ಕಂಡಕಂಡವರ ಬಹು ಕಾಡುತಿರಲು ‖ ಭಂಡರನು ದಂಡಿಸಲು | ಗಂಡುಗಲಿ ವರದ ಮಾರ್ತಂಡಭೈರವ ವೇಷ ಮಂಡಿಸಿದಗೇ ‖ ೧ ‖

ನೀಲ ಹರಿನೇರೆ ಸುರ | ಸೂಳೆಯರು ಚಾಮರವ | ಢಾಳಿಸಲು ಏಳ್ಕೋಟಿ ಮೂಲಬಲಗೇ ‖ ಕಾಲಹರ ಫಾಲಾಕ್ಷ | ಕಾಲಕೂಟಂಡ ಶಶಿ | ಮೌಳಿ ಕಾಳಗ ಮಲ್ಲ ಮಲ್ಲಾರಿಗೇ ‖ ೨ ‖

ಬಿಡದೆ ಕಡಿಯುವ ಶ್ವಾನ | ಘುಡಿಘುಡಿಪ ಘನಭೂಡ|ಗಡಣ ಕಿಡಿನಯನ ಘೃತಮಾರಿಯೊಡನೇ ‖ ಶಿಡಿಲ ನಡುಗಿಪ ಶರವ | ಜಡಿಜಡಿದು ದೈತ್ಯಮುಡಿ ಕಡಿದು ಕೆಡಹಿದ ಪೊಡವಿಯೊಡೆಯ ಮೃಡಗೇ ‖ ೩ ‖

ಯುದ್ಧದಲಿ ಮಣಿಮಲ್ಲ | ರೊದ್ದು ಕೆಡಹುತೆ ವರದ | ಮುದ್ದಡಿಯು ಸುದ್ಧ ಶರ ಮುಡಿಯಲಿರಿಸೇ ‖ ಬುದ್ಧಿ ವಿಕಸವ ಪೊಂದೆ | ಬಿದ್ದು ವಿಧವಿಧ ನುತಿಸೆ | ಉದ್ಧರಿಸಿಯೊಲಿದ ಜಗದುದ್ಧಾರಗೇ ‖ ೪ ‖

ಕಾಮರಿಪು ರವಿಕೋಟಿ | ಧಾಮ ಮುನಿಸೇವ್ಯ | ಸುತ್ರಾಮನತ ಭಂಡಾರ ಧಾಮವಪುಗೇ ‖ ಪ್ರೇಮ ಪುರಧಾಮ | ನಿಸ್ಸೀಮ ಶಶಿಧರನೆ ಶ್ರೀ | ರಾಮಸುತ ಗುರುದತ್ತ ನಾಮಧರಗೇ ‖ ೫ ‖

‖ ಶ್ರೀ ಮಾಲತೀಶಾರ್ಪಣಮಸ್ತು ‖

ಶ್ರೀ ರಾಮದಾಸ ತೋಸೀಖಾನಿ, ಹಾನಗಲ್ಲ.

---

ಆನಂದವನದ ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಭಿ. ವ. ಕಾಳೆ
ಅವರಿಂದ ಮುದ್ರಿಸಲ್ಪಟ್ಟಿತು.